

# ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯ

ವಿರಚಿತ

# ಶ್ರೀ ಹರಿವಾಯುಸ್ತುತಿಯ

## ಸರಳಾರ್ಥ




ಲೇಖಕರು ಮತ್ತು ಪ್ರಕಾಶಕರು :-

**ಪಿ. ವಿಷ್ಣುತೀರ್ಥ, ನವವೃಂದಾವನ**
**931, ಎರಡನೇ ಬೀದಿ, ನಾಲ್ಕನೇ ಬ್ಲಾಕ್**
**ರಾಜಾಜಿನಗರ, ಬೆಂಗಳೂರು-560 010**
**ದೂರವಾಣಿ : 3350491**

# ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯ
ವಿರಚಿತ

# ಶ್ರೀ ಹರಿವಾಯುಸ್ತುತಿಯ

## ಸರಳಾರ್ಥ

ಲೇಖಕರು :-
ಪಿ. ವಿಷ್ಣುತೀರ್ಥ, ನವವೃಂದಾವನ

ಪ್ರಥಮ ಮುದ್ರಣದ ಪ್ರಕಾಶಕರು :
ಶ್ರೀ ಹರಿವಿಠ್ಠಲ ಪ್ರಕಾಶನ
3, ಮೊದಲನೇ ಮುಖ್ಯ ಬೀದಿ, ಎನ್. ಆರ್. ಕಾಲೋನಿ
ಬೆಂಗಳೂರು-560 019
ದೂರವಾಣಿ : 628182

# SRI HARIVAYUSTUTI

Composed by Sri Trivikrama Panditacharya
with SARALARTHA (Simple Rendering)
by P. Vishnu Thirtha

ಪ್ರಥಮ ಮುದ್ರಣ : 18-12-1993
1000 ಪ್ರತಿಗಳು
ಬೆಲೆ : 15 ರೂಪಾಯಿಗಳು



ಮುದ್ರಣಕಾರರು :

(i) ಪುಟ 1 ರಿಂದ 124 ರವರೆಗೆ : ಸುಬೋಧ ಪ್ರೆಸ್
ಚಾಮರಾಜಪೇಟೆ, ಬೆಂಗಳೂರು-560 018

(ii) ರಕ್ಷಾಪುಟ ಮತ್ತು ಒಳಗಿನ ನಾಲ್ಕು ಪುಟಗಳು :
ಶಾಂತಲಾ ಪ್ರಿಂಟರ್ಸ್
ರಾಜಾಜಿನಗರ, ಬೆಂಗಳೂರು-560 010

# ಪ್ರಸ್ತಾವನೆ

ನಾನು ಬರೆದ ಶ್ರೀ ಹರಿವಾಯುಸ್ತುತಿಯ ವಿಸ್ತೃತ ವ್ಯಾಖ್ಯಾನವನ್ನು ಓದಿದ ನನ್ನ ಅನೇಕ ಮಿತ್ರರೂ ಮತ್ತು ಹಿತೈಷಿಗಳೂ ಸಾಮಾನ್ಯ ಜನರಿಗೂ ಅನುಕೂಲವಾಗುವಂತೆ ಇದನ್ನೇ ಸುಮಾರು 120 ಪುಟಗಳಲ್ಲಿ ಅಡಕವಾಗುವಂತೆ ಪ್ರತ್ಯೇಕವಾಗಿ ಬರೆಯುವಂತೆ ಸಲಹೆಮಾಡಿದ್ದರಿಂದ ಈ ಹೊತ್ತಗೆ ರಚಿತವಾಯಿತು.

ಇದನ್ನು ನಮ್ಮ ಆಪ್ತ ಹಿತೈಷಿಗಳಾದ ಶ್ರೀ ಹರಿವಿಠಲ ಪ್ರಕಾಶನದ ಶ್ರೀ ರಾಣ್ಯ ರಾಜಾರಾಯರು ಪ್ರಕಟಿಸಲು ಒಪ್ಪಿದ್ದರಿಂದ ಪ್ರಥಮ ಮುದ್ರಣದ ಭಾರವನ್ನು ಅವರಿಗೇ ವಹಿಸಲಾಯಿತು. ಈಚಿನ ಒಪ್ಪಂದದಂತೆ ಕೇವಲ ಮುನ್ನೂರು ಪ್ರತಿಗಳನ್ನು ನಾವೇ ಪ್ರಕಟಿಸಿದ್ದೇವೆ. ಮಿಕ್ಕ ಪ್ರತಿಗಳ ಪ್ರಕಾಶನ ಅವರಿಗೇ ಸೇರಿದೆ.

ಈ ಗ್ರಂಥವನ್ನು ಓದಿ ಶ್ರೀ ಹರಿವಾಯುಸ್ತುತಿಯ ಅರ್ಥವನ್ನು ಗ್ರಹಿಸಿಕೊಂಡು ಓದುಗರು ಶ್ರೀ ಹರಿವಾಯುಗಳ ಕೃಪೆಗೆ ಪಾತ್ರರಾಗಲೆಂದು ಆಶಿಸುತ್ತೇನೆ.

ಬೆಂಗಳೂರು
ತಾ॥ 10-2-1994

ವಿಷ್ಣುತೀರ್ಥ
ನವವೃಂದಾವನ

ಓಂ

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸ ಹಯಗ್ರೀವಾತ್ಮಕ
ಶ್ರೀ ಲಕ್ಷ್ಮೀನೃಸಿಂಹಾಯ ನಮಃ ॥

# ಶ್ರೀಹರಿವಾಯುಸ್ತುತಿಯ ಸರಲಾರ್ಥ

## ಲೇಖಕನ ಮಂಗಳಾಚರಣೆ

**ಶ್ರೀನೃಸಿಂಹಮಸಹ್ಯೋರು—ಪ್ರತ್ಯೂಹತಿಮಿರಾಪಹಮ್ ।**
**ಪ್ರಣಮಾಮಿ ರಮಾಕಾಂತಂ ಮಧ್ವಹೃತ್ಪದ್ಮವಾಸಿನಮ್ ॥ ೧ ॥**

ಅರ್ಥ—ಸಹಿಸಲು ಅಸಾಧ್ಯವಾದ ಮತ್ತು ಘೋರವಾದ ವಿಘ್ನಗಳೆಂಬ ಅಂಧಕಾರವನ್ನು ಪರಿಹಾರ ಮಾಡುವಂಥಾ, ಶ್ರೀಮನ್ಮಧ್ವಾಚಾರ್ಯರ ಹೃತ್ಕಮಲನಿವಾಸಿಯಾದ, ಹಾಗೂ ಲಕ್ಷ್ಮೀಪತಿಯಾದ ಶ್ರೀನರಸಿಂಹ ಸ್ವಾಮಿಯನ್ನು ನಾನು ಶ್ರದ್ಧಾಭಕ್ತ್ಯಾದರಗಳಿಂದ ನಮಸ್ಕರಿಸುತ್ತೇನೆ.

**ಪ್ರಣಮ್ಯ ಶ್ರೀಮದಾನಂದ—ತೀರ್ಥಾದಿ ಗುರುಶೇಖರಾನ್ ।**
**ಹರಿವಾಯುಸ್ತುತೇರ್ವಕ್ಷ್ಯೇ ಸರಲಾರ್ಥಂ ತು ಕೇವಲಮ್ ॥ ೨ ॥**

ಅರ್ಥ—ಶ್ರೀಮನ್ಮಧ್ವಾಚಾರ್ಯರು, ಅವರ ಸಾಕ್ಷಾಚ್ಛಿಷ್ಯರಾದ ಆದಿ ಟೀಕಾಕಾರರೆಂದು ಪ್ರಸಿದ್ಧರಾದ ಶ್ರೀ ಪದ್ಮನಾಭತೀರ್ಥರು, ಶ್ರೀ ಜಯತೀರ್ಥರೆಂಬ ಟೀಕಾಚಾರ್ಯರು, ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀ ರಾಘವೇಂದ್ರಸ್ವಾಮಿಗಳೇ ಮೊದಲಾದ ಶ್ರೇಷ್ಠ ಗುರುಗಳನ್ನೂ, ನನ್ನ ವಿದ್ಯಾಗುರುಗಳನ್ನೂ ವಂದಿಸಿ ಅವರ ಕೃಪಾಬಲದಿಂದ ಶ್ರೀಹರಿವಾಯುಸ್ತುತಿಗೆ ಸರಲವಾದ ಸಾಮಾನ್ಯಾರ್ಥವನ್ನು ಮಾತ್ರ ಹೇಳುವೆನು.

**ಯದ್ಯಪ್ಯಸ್ಯಾ ವಿಶೇಷಾರ್ಥೋ ವಿಸ್ತರೇಣೈವ ವರ್ಣಿತಃ ।**
**ತದ್ಗ್ರಹಣೇ ತ್ವಶಕ್ತಾನಾಂ ಕೃತೇ ಕೃತಿರಿಯಂ ಕೃತಾ ॥ ೩ ॥**

ಅರ್ಥ—ಯದ್ಯಪಿ ನಾನೇ ಈ ಹರಿವಾಯುಸ್ತುತಿಗೆ ವಿಶೇಷಾರ್ಥವನ್ನು ವಿಸ್ತಾರವಾಗಿ ಬರೆದಿದ್ದೇನಾದರೂ ಅಷ್ಟು ಹೆಚ್ಚು ವಿಷಯಗಳನ್ನು ಗ್ರಹಿಸಲು

ಸಾಮರ್ಥ್ಯವಿಲ್ಲದ ಸಾಧಾರಣ ಜನಗಳ ಸಲುವಾಗಿಯೇ ಈ ಕೃತಿಯನ್ನು ರಚಿಸ ಲಾಗಿದೆ. (ಆದ್ದರಿಂದ ಇಲ್ಲಿ ಹರಿಪರವಾದ ವಿಶೇಷಾರ್ಥಗಳನ್ನು ಕೊಟ್ಟಿಲ್ಲ.)

---

## ಪೀಠಿಕೆ

**1. ಕರ್ತೃಗಳು**—ಶ್ರೀಹರಿವಾಯುಸ್ತುತಿಯನ್ನು ರಚಿಸಿದವರು ತ್ರಿವಿಕ್ರಮಪಂಡಿತಾಚಾರ್ಯರೆಂಬ ಉದ್ದಾಮ ಪಂಡಿತರು. ಇವರು ಉಡುಪಿಯ ಕಡೆಯವರೂ, ಶ್ರೀ ಮಧ್ವಾಚಾರ್ಯರ ಸಮಕಾಲೀನರೂ ಆಗಿದ್ದರು. ಆ ಕಾಲದಲ್ಲಿ ಇವರು ಅದ್ವೈತವೇದಾಂತದಲ್ಲಿ ನಿಷ್ಣಾತ ವಿದ್ವಾಂಸರಾಗಿದ್ದ ರಲ್ಲದೆ ಅದ್ವೈತ ವಿದ್ವನ್ಮಣಿಗಳಲ್ಲೆಲ್ಲಾ ಸರ್ವಶ್ರೇಷ್ಠರೆಂದು ಗೌರವಿಸಲ್ಪಡು ತ್ತಿದ್ದರು. ಒಮ್ಮೆ ಕುಡಿಲು ಎಂಬ ಗ್ರಾಮದಲ್ಲಿ ಪಂಡಿತಾಚಾರ್ಯರಿಗೂ ಮಧ್ವಾಚಾರ್ಯರಿಗೂ ವಾಗ್ವಾದ ಆರಂಭವಾಗಿ ಹದಿನೈದು ದಿನಗಳವರೆಗೂ ಆ ವಾದ ನಡೆಯಿತು. ಕಡೆಗೆ ಆ ವಾದದಲ್ಲಿ ಸೋತು ತ್ರಿವಿಕ್ರಮಪಂಡಿತರು ಮಧ್ವಮತಾನುಯಾಯಿಗಳಾದರು. ಅವರೇ ವಾಯುದೇವರ ಅವತಾರತ್ರಯ-ವರ್ಣನಾರೂಪವಾದ ಈ ವಾಯುಸ್ತುತಿಯನ್ನು ರಚಿಸಿದರು. ಹಾಗೆ ರಚಿಸಲು ಒದಗಿದ ಸಂದರ್ಭವನ್ನು ಒಂದು ಐತಿಹ್ಯವು ತಿಳಿಸುತ್ತದೆ. ಅದು ಛಲಾರಿ ಟೀಕೆಯಲ್ಲೂ ವಿಶ್ವಪತಿತೀರ್ಥರ ಟೀಕೆಯಲ್ಲೂ ಸ್ವಲ್ಪ ಭಿನ್ನವಾಗಿ ನಿರೂಪಿತ ವಾಗಿದೆ.

**2. ಛಲಾರಿ ಟೀಕೆಯ ಪಾಠ**—ಬದರಿಕಾಶ್ರಮದಲ್ಲಿದ್ದಾಗ ಒಂದು ದಿನ ಪಂಡಿತಾಚಾರ್ಯರು ಶ್ರೀಮದಾಚಾರ್ಯರೊಡನೆ ಹೋಗುತ್ತಿದ್ದಾಗ ಮಧ್ಯೆ ಒಂದು ಗುಡಿ ಸಿಕ್ಕಿತು. ಆ ಗುಡಿಯೊಳಗೆ ಹೋದ ಆಚಾರ್ಯರು ಎಷ್ಟು ಹೊತ್ತಾದರೂ ಹೊರಗೆ ಬರಲಿಲ್ಲ. ಆದರಿಂದ ಕುತೂಹಲಾವಿಷ್ಟರಾಗಿ ಪಂಡಿತಾಚಾರ್ಯರು ಬಾಗಿಲಲ್ಲಿದ್ದ ಸಣ್ಣ ಕಿಂಡಿಯಲ್ಲಿ ಇಣಿಕಿ ನೋಡಿದರು. ಒಳಗಿನ ದೃಶ್ಯವನ್ನು ಕಂಡು ಪುಳಕಾಂಕಿತರಾದರು. ಹನುಮರೂಪದಿಂದ ಶ್ರೀರಾಮಚಂದ್ರನನ್ನೂ, ಭೀಮರೂಪದಿಂದ ಶ್ರೀಕೃಷ್ಣಪರಮಾತ್ಮನನ್ನೂ ಮಧ್ವರೂಪದಿಂದ ವೇದವ್ಯಾಸದೇವರನ್ನೂ ಅರ್ಚಿಸುತ್ತಿದ್ದ ದಿವ್ಯದೃಶ್ಯವನ್ನು

ಕಂಡು ವಾಯುದೇವರ ಅವತಾರಗಳ ಸ್ತೋತ್ರರೂಪವಾದ ವಾಯುಸ್ತುತಿಯನ್ನು ಸ್ಫೂರ್ತಿಯಿಂದ ರಚಿಸಿ ಅದನ್ನು ಶ್ರೀಮದಾಚಾರ್ಯರಿಗೆ ಸಮರ್ಪಿಸಿದರು.

**3. ಉಡುಪಿಯ ಮಠದ ಪಾಠ**—ಒಂದು ದಿವಸ ಶ್ರೀಮದಾಚಾರ್ಯರು ನೈವೇದ್ಯ ಸಮರ್ಪಣ ಕಾಲದಲ್ಲಿ ಎಷ್ಟು ಹೊತ್ತಾದರೂ ನೈವೇದ್ಯ ಮುಗಿಸಿ ಗಂಟೆ ಬಾರಿಸಲಿಲ್ಲ. ದ್ವಾದಶ ಸ್ತೋತ್ರವನ್ನು ಪಠಿಸುತ್ತಿದ್ದ ಪಂಡಿತಾಚಾರ್ಯರು ಕುತೂಹಲದಿಂದ ಸಂದಿಯಲ್ಲಿ ಇಣಿಕಿ ನೋಡಿದರು. ಆಗ ಅವರಿಗೆ ವಾಯುದೇವರು ತಮ್ಮ ಮೂರು ರೂಪಗಳಿಂದ ತಮ್ಮ ಮೂರು ಉಪಾಸ್ಯಮೂರ್ತಿಗಳನ್ನು—ಹನುಮದ್ರೂಪದಿಂದ ಶ್ರೀರಾಮನನ್ನೂ, ಭೀಮರೂಪದಿಂದ ಶ್ರೀಕೃಷ್ಣನನ್ನೂ ಮಧ್ವರೂಪದಿಂದ ವೇದವ್ಯಾಸರನ್ನೂ ಅರ್ಚಿಸುತ್ತಿದ್ದ ದಿವ್ಯ ದೃಶ್ಯವನ್ನು ಕಂಡು ರೋಮಾಂಚನಗೊಂಡರು. ಆ ಸ್ಫೂರ್ತಿಯಲ್ಲೇ ಅವರು ವಾಯುದೇವರ ಅವತಾರತ್ರಯಸ್ತೋತ್ರರೂಪವಾದ ವಾಯುಸ್ತುತಿಯನ್ನು ರಚಿಸಿ ಅದನ್ನು ಶ್ರೀಮದಾಚಾರ್ಯರಿಗೆ ಸಮರ್ಪಿಸಿದರು.

**4. ನಖಸ್ತುತಿಯ ರಚನೆ**—ಶ್ರೀಮದಾಚಾರ್ಯರು ಪಂಡಿತಾಚಾರ್ಯರ ಶ್ರದ್ಧಾಭಕ್ತ್ಯಾದರವನ್ನು ನೋಡಿ ಮೆಚ್ಚಿದರಾದರೂ ಅವರಿಗೆ ವಾಯುಸ್ತುತಿಯು ಕೇವಲ ತಮ್ಮ ಸ್ತುತಿಯಿಂದಲೇ ಆರಂಭವಾಗಿದ್ದುದು ತೃಪ್ತಿಕರವಾಗಲಿಲ್ಲ. ಆದಕಾರಣ ನರಸಿಂಹನ ನಖಸ್ತುತಿರೂಪವಾದ ಎರಡು ಶ್ಲೋಕಗಳನ್ನು ತಾವೇ ರಚಿಸಿ ಈ ಎರಡು ಶ್ಲೋಕಗಳನ್ನೂ ವಾಯುಸ್ತುತಿ ಹೇಳಿಕೊಳ್ಳುವುದಕ್ಕೆ ಮೊದಲಲ್ಲೂ ಕಡೆಯಲ್ಲೂ ಸಂಪುಟಾಕಾರವಾಗಿ ಹೇಳಿ-ಕೊಂಡರೆ ಮಾತ್ರ ಅದು ಸಿದ್ಧಿಸುವುದೆಂದು ಹೇಳಿ ಆ ವಾಯುಸ್ತುತಿಯ ಒಂದೊಂದು ಶ್ಲೋಕಕ್ಕೂ ಒಂದೊಂದು ಫಲವು ಲಭಿಸುವಂತೆ ಅನುಗ್ರಹಿಸಿದರು. ಅದರಂತೆ ಇವತ್ತಿನವರೆಗೂ ಎಲ್ಲರೂ ವಾಯುಸ್ತುತಿಯ ಶ್ಲೋಕಗಳನ್ನು ಪಠಿಸುವುದಕ್ಕೆ ಮುಂಚೆ ಮೊದಲಲ್ಲೂ ಕೊನೆಯಲ್ಲೂ—ಒಂದು ಶ್ಲೋಕ ಹೇಳಿಕೊಂಡರೂ ಸಹ–ಸಂಪುಟಾಕಾರವಾಗಿ ನಖಸ್ತುತಿ ಹೇಳಿಕೊಂಡೇ ಪಠಿಸುವುದು ಪರಂಪರಾಗತವಾದ ಸಂಪ್ರದಾಯ ಪದ್ಧತಿಯಾಗಿ ಬಂದಿದೆ. ಆದಕಾರಣ ಈಗ ಮೊದಲು ನಖಸ್ತುತಿಯ ಪ್ರಥಮ ಶ್ಲೋಕಕ್ಕೇ ಹೋಗೋಣ.

---

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸ-
ಹಯಗ್ರೀವಾತ್ಮಕ ಶ್ರೀಲಕ್ಷ್ಮೀನೃಸಿಂಹಾಯ ನಮಃ ।

ಅಥ

# ನರಸಿಂಹ ನಖಸ್ತುತಿಃ

ಶ್ರೀ ಗುರುಭ್ಯೋ ನಮಃ । ಹರಿಃ ಓಂ ॥

**ಪಾಂತ್ವಸ್ಮಾನ್ ಪುರುಹೂತವೈರಿಬಲವನ್-ಮಾತಂಗಮಾದ್ಯದ್ ಘಟಾ
ಕುಂಭೋಚ್ಚಾದ್ರಿ–ವಿಪಾಟನಾಧಿಕಪಟು—ಪ್ರತ್ಯೇಕವಜ್ರಾಯಿತಾಃ ।
ಶ್ರೀಮತ್ ಕಂಠೀರವಾಸ್ಯ–ಪ್ರತತಸುನಖರಾ ದಾರಿತಾರಾತಿದೂರ-
ಪ್ರಧ್ವಸ್ತ–ಧ್ವಾಂತ-ಶಾಂತ—ಪ್ರವಿತತ–ಮನಸಾ, ಭಾವಿತಾ
ನಾಕಿವೃಂದೈಃ ॥ ೧ ॥**

(ಉಡುಪಿಕಡೆಯ ಪಾಠಾಂತರ—**ಭಾವಿತಾ ಭೂರಿಭಾಗ್ಯೈಃ**)

---

1) ಸೂಚನೆ—ಒಂದು ಶ್ಲೋಕದ ಮುಖ್ಯಭಾವವು ಏನೆಂಬುದು ಮೊದಲು ಅರ್ಥವಾದರೆ ಆಮೇಲೆ ಅದರ ಅನ್ವಯಾರ್ಥವೂ ತಾತ್ಪರ್ಯವೂ ತಿಳಿದು ಇಡೀ ಶ್ಲೋಕದ ಒಟ್ಟು ಭಾವವೂ ಮನಸ್ಸಿಗೆ ನಾಟುತ್ತದೆ. ಆದಕಾರಣ ಈ ಪುಸ್ತಕದಲ್ಲಿ ಅನ್ವಯಾರ್ಥ ಕೊಡುವುದಕ್ಕೆ ಮೊದಲು ಆಯಾ ಶ್ಲೋಕದ ಪ್ರಧಾನವಾಕ್ಯವನ್ನು ದಪ್ಪ ಅಕ್ಷರದಲ್ಲಿ (ಕರ್ತೃ-ಕರ್ಮ ಕ್ರಿಯೆಗಳನ್ನು) ಬರೆದು ಅದರ ಅರ್ಥವನ್ನೂ ತಿಳಿಸಲಾಗಿದೆ.

2) ಸೂಚನೆ—'ಶ್ರೀಮತ್ಕಂಠೀರವಾಸ್ಯಪ್ರತತಸುನಖರಾಃ !' ಎಂಬುದನ್ನು ಎರಡು ರೀತಿ ಪರಿಚ್ಛೇದ ಮಾಡಬಹುದು.—ಅಷ್ಟೂ ಒಂದೇ ಪದ ಎಂದು ಗ್ರಹಣ ಮಾಡಿದರೆ ಇದೇ ಕರ್ತೃಪದವಾಗುತ್ತದೆ. ಅಥವಾ ಶ್ರೀಮತ್ಕಂಠೀರವಾಸ್ಯ ಎಂದೂ ಪ್ರತತಸುನಖರಾಃ ಎಂದೂ ಎರಡು ಬೇರೆ ಬೇರೆ ಪದವೆಂದೂ ಹೇಳಬಹುದು. ಆಗ ಶ್ರೀಮತ್ಕಂಠೀರವಾಸ್ಯ ಎಂದು ಸಂಬೋಧನೆಯೂ ಸುನಖರಾಃ ಎಂಬುದು ಕರ್ತೃ-ಪದವೂ ಆಗುತ್ತವೆ.

**5. ಶ್ರೀಹರಿವಾಯುಸ್ತುತಿ**—ವಾಯುಸ್ತುತಿಯ ಪ್ರತಿಯೊಂದು ಶ್ಲೋಕಕ್ಕೂ ಹೇಗೆ ವಾಯುಪರವಾದ ಒಂದು ಅರ್ಥವಿದೆಯೋ ಹಾಗೆಯೇ ಹರಿ (ವಿಷ್ಣು) ಪರವಾದ ಇನ್ನೊಂದು ಅರ್ಥವೂ ಇದೆ. ಇದನ್ನು ತಿಳಿದೇ

ನಮ್ಮ ಹಿರಿಯರೆಲ್ಲ ಈ ಸ್ತುತಿಯನ್ನು **ಶ್ರೀಹರಿವಾಯುಸ್ತುತಿ** ಎಂದೇ ಕರೆಯುತ್ತಾರೆ. ಈ ಪುಸ್ತಕದಲ್ಲಿ ಹರಿಪರವಾದ ಅರ್ಥಕ್ಕೆ ಹೋಗದೆ ವಾಯುಪರವಾದ ಸರಳಾರ್ಥವನ್ನೂ ಲಲಿತ ಭಾವಾರ್ಥವನ್ನೂ ಮಾತ್ರ ಹೇಳಿದ್ದೇವೆ.

ಪ್ರಕೃತ ನಖಸ್ತುತಿಯು ಶ್ರೀಹರಿವಾಯುಸ್ತುತಿಗೆ ಮಂಗಳಾಚರಣ ರೂಪವಾಗಿರುವುದು ಮಾತ್ರವಲ್ಲದೆ ಆ ಲಕ್ಷ್ಮೀನೃಸಿಂಹನೇ ಈ ಸ್ತುತಿಗೆ ಮುಖ್ಯ ಪ್ರತಿಪಾದ್ಯನೂ ಅಧಿಕೃತ ದೇವತೆಯೂ ಆಗಿದ್ದಾನೆ ಎಂದೂ ಸೂಚಿಸುತ್ತದೆ. ಈಗ ನಖಸ್ತುತಿಯ ಮೊದಲನೇ ಶ್ಲೋಕದಲ್ಲಿ ನಖ ಎಂದರೆ ಉಗುರು ಎಂದರ್ಥ. ಇದೇನು, ನರಸಿಂಹನನ್ನು ಸ್ತುತಿಸುವುದನ್ನು ಬಿಟ್ಟು ನಖವನ್ನೇಕೆ ಸ್ತುತಿಸಿದರು ? ಎಂದರೆ ನರಸಿಂಹನ ಉಗುರುಗಳು ಎಲ್ಲರ ಉಗುರುಗಳಂತೆ ಅಲ್ಲ–ಅವು ನರಸಿಂಹನಂತೆಯೇ ಜ್ಞಾನಾನಂದಬಲಸ್ವರೂಪವಾಗಿಯೂ, ಅನಂತವಾಗಿಯೂ, ವಿಶ್ವವ್ಯಾಪಿಯೂ ಆಗಿದ್ದು ನರಸಿಂಹನಿಂದ ಅತ್ಯಂತಾಭಿನ್ನವಾಗಿ ನರಸಿಂಹ ಸ್ವರೂಪವೇ ಆಗಿದೆಯೆಂಬ ಮಹಾಪ್ರಮೇಯವನ್ನು ನಮ್ಮೆಲ್ಲರಿಗೂ ತಿಳಿಸಿ ಕೊಡುವುದಕ್ಕಾಗಿ ಹೀಗೆ ಮಾಡಿದ್ದಾರೆಂದು ತಿಳಿಯಬೇಕು.

**ಪ್ರಧಾನವಾಕ್ಯ**—ಶ್ರೀಮತ್ಕಂಠೀರವಾಸ್ಯ ! (ಸಂಬೋಧನೆ) ಸುನಖರಾಃ (ಕರ್ತೃಪದ) ಅಸ್ಮಾನ್ (ಕರ್ಮ) ಪುನಂತು (ಕ್ರಿಯಾಪದ)—ಹೇ ನರಸಿಂಹನೇ ನಿನ್ನ ಉಗುರುಗಳು ನಮ್ಮನ್ನು ಕಾಪಾಡಲಿ ಎಂಬುದೇ ಈ ಶ್ಲೋಕದ ಮುಖ್ಯಭಾವ.

**ಅನ್ವಯಾರ್ಥ — ಶ್ರೀಮತ್ಕಂಠೀರವಾಸ್ಯ—ಶ್ರೀಮತ್**— ಮಂಗಳಮಯವಾದ, ಅಥವಾ ಕಾಂತಿಯಿಂದಲೂ, ಐಶ್ವರ್ಯಾದಿಗಳಿಂದಲೂ ಕೂಡಿದ ಅಥವಾ ಲಕ್ಷ್ಮೀಸಮೇತನಾದ, **ಕಂಠೀರವ**—ಸಿಂಹದಂತೆ, **ಆಸ್ಯ**—ಮುಖವುಳ್ಳ ಹೇ ಲಕ್ಷ್ಮೀನೃಸಿಂಹನೇ ! 1) ಪುರುಹೂತ........ ವಜ್ರಾಯಿತಾಃ— **ಪುರಹೂತವೈರಿ**–ದೇವೇಂದ್ರನ ಶತ್ರುಗಳಾದ ದೈತ್ಯರೆಂಬ, **ಬಲವನ್**–ಬಲಿಷ್ಠವಾದ, **ಮಾತಂಗ**—ಆನೆಗಳ, **ಮಾದ್ಯದ್**—ಮದಿಸಿದ, **ಘಟಾ**—ಹಿಂಡುಗಳ (ಗುಂಪುಗಳ), **ಕುಂಭ**—ಕುಂಭಸ್ಥಳ (ನೆತ್ತಿ)ಗಳೆಂಬ, **ಉಚ್ಚ–ಅದ್ರಿ**–ಎತ್ತರವಾದ ಬೆಟ್ಟಗಳನ್ನು, **ವಿಪಾಟನ**—ಧ್ವಂಸಮಾಡುವುದರಲ್ಲಿ, **ಅಧಿಕಪಟು**—ಅತ್ಯಂತ ಸಮರ್ಥವಾದ, **ಪ್ರತ್ಯೇಕ**—ಒಂದೊಂದೂ, **ವಜ್ರಾ**

**ಯಿತಾಃ**–ವಜ್ರಾಯುಧದಂತೆ ಇರುವ; 2) ದಾರಿತಾ....ಮನಸಾ....**ದಾರಿತಾ**–ಸೀಳಲ್ಪಟ್ಟ, **ಅರಾತಿ**—ಶತ್ರುಗಳುಳ್ಳ ; **ದೂರಪ್ರಧ್ವಸ್ತ**—ದೂರಕ್ಕೆ ಓಡಿಸಲ್ಪಟ್ಟ ಅಥವಾ ದೂರದಲ್ಲೇ ಧ್ವಂಸಮಾಡಲ್ಪಟ್ಟ, **ಧ್ವಾಂತ**—ಅಂಧಕಾರವುಳ್ಳ (ಅಜ್ಞಾನವೆಂಬ ಅಂಧಕಾರವುಳ್ಳ), **ಶಾಂತ**–ಪ್ರಶಾಂತವಾದ ಅಥವಾ ಭಗವಂತನಲ್ಲೇ ಆಸಕ್ತವಾದ ಮನಸ್ಸುಳ್ಳ; **ಪ್ರವಿತತ**—ವಿಶಾಲವಾದ ಅಥವಾ **ಪ್ರ**–**ವಿ**–ಶ್ರೇಷ್ಠನಾದ ವಿಷ್ಣುವಿನಲ್ಲಿ, **ತತ**–ವ್ಯಾಪ್ತವಾದ, **ಮನಸಾ**—ಮನಸ್ಸಿನಿಂದ ; **ನಾಕಿವೃಂದೈಃ**—ಬ್ರಹ್ಮರುದ್ರಾದಿ ದೇವತಾ ಸಮೂಹಗಳಿಂದ (ಅಥವಾ ಪಾಠಾಂತರ ರೀತ್ಯಾ **ಭೂರಿಭಾಗ್ಯೈಃ**—ಹೆಚ್ಚು ಭಾಗ್ಯಶಾಲಿಗಳಾದ ಬ್ರಹ್ಮಾದಿ ದೇವತೆಗಳಿಂದ) ; **ಭಾವಿತಾಃ**-–ಧ್ಯಾನಿಸಲ್ಪಟ್ಟ, ಶ್ರೀಮತ್........ನಖರಾಃ—**ಶ್ರೀಮತ್ಕಂಠೀರವಾಸ್ಯ**—ಲಕ್ಷ್ಮೀಸಮೇತನಾದ ಅಥವಾ ಕಾಂತಿ, ಬಲ, ಮಂಗಳಾದಿಗಳಿಂದ ಕೂಡಿದ ಶ್ರೀಲಕ್ಷ್ಮೀನರಸಿಂಹನ, **ಪ್ರತತ**—ಸರ್ವತ್ರ ವ್ಯಾಪ್ತವಾದ, **ಸು**-**ನಖರಾಃ**—ಸಮೀಚೀನವಾದ(ಜ್ಞಾನಾನಂದಮಯವಾದ) ಉಗುರುಗಳು ; **ಅಸ್ಮಾನ್**—ನಮ್ಮನ್ನು (ನಮ್ಮೆಲ್ಲರನ್ನೂ) ; **ಪಾಂತು**—ಕಾಪಾಡಲಿ.

**ತಾತ್ಪರ್ಯ**—ಸತ್ಕಾರ್ಯಗಳಿಗೆ ಯಾವಾಗಲೂ ನೂರೆಂಟು ವಿಘ್ನಗಳು ಅಡ್ಡಬರುತ್ತವೆಯೆಂಬುದಕ್ಕೆ 'ಶ್ರೇಯಾಂಸಿ ಬಹುವಿಘ್ನಾನಿ' ಎಂಬ ಹಿರಿಯರ ನುಡಿಯೇ ಸಾಕ್ಷಿ. ಇದು ಎಲ್ಲರ ಅನುಭವಕ್ಕೂ ಬಂದ ವಿಷಯವೇ ಆಗಿದೆ. ಈ ರೀತಿ ವಿಘ್ನಗಳು ಬರುವುದಕ್ಕೆ ದುಷ್ಟಸ್ವಭಾವವುಳ್ಳ ದೈತ್ಯರ ತಂಡಗಳೇ ಕಾರಣವಾಗಿವೆ. ಈ ದೈತ್ಯರು ಮದಿಸಿದ ಆನೆಗಳಂತೆ ಮದೋನ್ಮತ್ತರಾಗಿರುವರಲ್ಲದೆ ಆನೆಗಳಂತೆ ತಂಡತಂಡವಾಗಿಯೇ ಸಂಚರಿಸುತ್ತಿರುತ್ತಾರೆ. ಎಲ್ಲಾ ಸತ್ಕಾರ್ಯಗಳಿಗೂ ನಾನಾ ವಿಧವಾಗಿ ಅಡಚಣೆಗಳನ್ನು ತಂದೊಡ್ಡುತ್ತಾರೆ. ಆದರೆ ಆನೆಯ ಗುಂಪುಗಳನ್ನು ಸಿಂಹವು ಹೇಗೆ ಎದುರಿಸುತ್ತದೆಯೋ ಮತ್ತು ವಜ್ರಾಯುಧವು ಬೆಟ್ಟಗಳನ್ನು ಎಷ್ಟೇ ದೊಡ್ಡದಾಗಿದ್ದರೂ ಹೇಗೆ ಧ್ವಂಸಮಾಡಿಬಿಡುತ್ತದೋ ಹಾಗೆ ನರಸಿಂಹನ ಒಂದೊಂದು ಉಗುರೂ ದೈತ್ಯರ ತಂಡಗಳನ್ನು ಧ್ವಂಸಮಾಡಿಬಿಡುತ್ತದೆ. ಒಂದೊಂದು ಉಗುರಿಗೇ ಅಂಥಾ ಶಕ್ತಿಯಿರುವಾಗ ಅನೇಕ ಉಗುರುಗಳ ಬಲವು ಹೇಳಲಿಕ್ಕೇ ಸಾಧ್ಯವಿಲ್ಲ. ಆದ್ದರಿಂದಲೇ ಬ್ರಹ್ಮರುದ್ರೇಂದ್ರಾದಿ ಸಕಲ ದೇವತೆಗಳೂ ನರಸಿಂಹನ ಉಗುರುಗಳ ಧ್ಯಾನದ ಮಹಿಮೆ

ಯಿಂದಲೇ ಸಕಲವಿಧ ಶತ್ರುಗಳ ಬಾಧೆಯಿಂದಲೂ ಪಾರಾಗಿ ಅಜ್ಞಾನದಿಂದ ಮುಕ್ತರಾಗಿ ಪ್ರಶಾಂತ ಮನಸ್ಸಿನಿಂದ ಆ ನರಸಿಂಹನ ನಖಗಳ ಧ್ಯಾನೋಪಾಸನೆಯಲ್ಲೇ ನಿರತರಾಗಿದ್ದಾರೆ, ಏಕೆಂದರೆ ಆ ನರಸಿಂಹನ ನಖಗಳೂ ಅವನಂತೆಯೇ ಜ್ಞಾನಾನಂದಮಯವಾಗಿ ಅಪ್ರಾಕೃತಸ್ವರೂಪವುಳ್ಳವುಗಳಾಗಿ ಅನಂತವೂ, ಸರ್ವವ್ಯಾಪಿಯೂ ಆಗಿದ್ದು ಅವನಿಂದ ಅತ್ಯಂತಾಭಿನ್ನವಾಗಿ ನರಸಿಂಹ ಸ್ವರೂಪವೇ ಆಗಿವೆ. ಇಂಥಾ ಅಮೋಘವಾದ ನರಸಿಂಹನ ನಖಗಳು ನಮ್ಮೆಲ್ಲರನ್ನೂ ಕಾಪಾಡಲಿ ಎಂದು ಶ್ರೀಮದಾಚಾರ್ಯರು ಪ್ರಾರ್ಥಿಸಿದ್ದಾರೆ.

**ಲಕ್ಷ್ಮೀಕಾಂತ ! ಸಮಂತತೋಽಪಿ ಕಲಯನ್ ನೈವೇಶಿತುಸ್ತೇ ಸಮಂ**
(ಪಾಠಾಂತರ–ಸಮಂತತೋ । ವಿಕಲಯನ್)
**ಪಶ್ಯಾಮ್ಯುತ್ತಮವಸ್ತು ದೂರತರತೋ–ಽಪಾಸ್ತಂ ರಸೋ**
**ಯೋಽಷ್ಟಮಃ ।**
**ಯದ್ರೋಷೋತ್ಕರ-ದಕ್ಷನೇತ್ರಕುಟಿಲ–ಪ್ರಾಂತೋತ್ಥಿತಾಗ್ನಿಸ್ಫುರತ್–**
**ಖದ್ಯೋತೋಪಮ–ವಿಸ್ಫುಲಿಂಗಭಸಿತಾ, ಬ್ರಹ್ಮೇಶ–**
**ಶಕ್ರೋತ್ಕರಾಃ ॥೨॥**

**ಎರಡನೇ ಶ್ಲೋಕ**—(ಅವತಾರಿಕೆ) ನರಸಿಂಹನ ಉಗುರುಗಳಿಗೂ ನರಸಿಂಹನಿಗೂ ಈಷನ್ಮಾತ್ರವೂ ಭೇದವಿಲ್ಲವೆಂಬುದನ್ನು ಸಮರ್ಥಿಸುವುದಕ್ಕಾಗಿ ಈ ಶ್ಲೋಕದಲ್ಲಿ ಸಾಕ್ಷಾನ್ನೃಸಿಂಹನನ್ನೇ ನೇರವಾಗಿ ಸಂಬೋಧಿಸಿ ಅವನೇ ಸರ್ವೋತ್ತಮನೆಂಬುದನ್ನು ಯುಕ್ತಿಯಿಂದ ಸಾಧಿಸಿ ತೋರಿಸುತ್ತಾರೆ.

**ಪ್ರಧಾನ ವಾಕ್ಯಗಳು**—ಕ) ಲಕ್ಷ್ಮೀಕಾಂತ ! ತೇ ಸಮಂ ನೈವ ಪಶ್ಯಾಮಿ—ಹೇ ಲಕ್ಷ್ಮೀನೃಸಿಂಹ, ನಿನಗೆ ಸಮಾನವಾದ ವಸ್ತುವನ್ನೇ ಕಾಣೆನು, ಖ) ಉತ್ತಮವಸ್ತು ದೂರತರತಃ ಅಪಾಸ್ತಂ–ನಿನಗಿಂತ ಉತ್ತಮ ವಸ್ತು ಇರುವ ಸಂಭವವೇ ಇಲ್ಲ.

**ಅನ್ವಯಾರ್ಥ—ಲಕ್ಷ್ಮೀಕಾಂತ**–ಲಕ್ಷ್ಮೀಪತಿಯಾದ ಹೇ ನೃಸಿಂಹ ! **ಸಮಂತತಃ ಅ-ಪಿ**—ಎಲ್ಲಾ ಕಡೆಯೂ (ಎಲ್ಲಾ ಶಾಸ್ತ್ರಗಳಲ್ಲೂ) ; (ವಿ) **ಕಲಯನ್**—ಹುಡುಕಿ ನೋಡಿದರೂ (ವಿಚಾರಮಾಡಿ ನೋಡಿದರೂ) ;

**ಈಶಿತುಃ**–ಸರ್ವಸ್ವಾಮಿಯಾದ ಅಥವಾ ಸರ್ವಸಮರ್ಥನಾದ ; **ತೇ**–ನಿನ್ನ ; **ಸಮಂ (ಏವ)**-ಸರಿಸಮಾನವಾದ ವಸ್ತುವನ್ನೇ ; **ನೈವ ಪಶ್ಯಾಮಿ**-ಎಲ್ಲೂ ನೋಡಲಿಲ್ಲ (ಎಲ್ಲೂ ಕಾಣೆನು). ಹೀಗಿರಲು, **ಉತ್ತಮವಸ್ತು**–ನಿನಗಿಂತ ಶ್ರೇಷ್ಠವಾದ ಪದಾರ್ಥವು, **ದೂರತರತಃ ಅಪಾಸ್ತಂ**–ದೂರದಿಂದಲೇ ಹೊರಟು ಹೋಯಿತು. ಏಕೆಂದರೆ **ಅಷ್ಟಮಃ**–ಎಂಟನೆಯ, **ರಸಃ**–ಸಾರಭೂತವಾದ ವಸ್ತುವೆಂಬುದು ; **ಯಃ**–ಯಾವುದು ಇದೆಯೋ, ಅದು ನೀನೇ ಆಗಿದ್ದೀಯೆ. (ಛಾಂದೋಗ್ಯೋಪನಿಷತ್ತಿನಲ್ಲಿ ಧರಾದೇವಿಯಿಂದ ಆರಂಭಿಸಿ ಲಕ್ಷ್ಮಿಯವರೆಗೆ ಒಂದಕ್ಕೊಂದು ಮಿಗಿಲಾದ ಅಥವಾ ಹೆಚ್ಚು ಹೆಚ್ಚು ಶ್ರೇಷ್ಠವಾದ ಏಳು ವಸ್ತುಗಳಿವೆಯೆಂದು ಹೇಳಿ ಈ ಎಲ್ಲಕ್ಕಿಂತಲೂ ಆಳತೆಯಿಲ್ಲದಷ್ಟು (ಅನಂತಪಟ್ಟು) ಉತ್ತಮವಾದ **ಎಂಟನೇ** ರಸವೇ ಭಗವಂತ ಎಂದು ಹೇಳಿದೆ. ಆ ಭಗವಂತನೇ ನೀನಾದ್ದರಿಂದ ನಿನಗಿಂತ ಉತ್ತಮವಸ್ತು ಇಲ್ಲವೆಂಬುದು ಸ್ವತಃ ಸಿದ್ಧ. ಅಥವಾ ಲೋಕದಲ್ಲಿ ಹುಳಿ, ಉಪ್ಪು, ಖಾರ ಇತ್ಯಾದಿ ಆರು ರಸಗಳು ಮಾತ್ರ ಪ್ರಸಿದ್ಧವಾಗಿವೆ. ಅಕಸ್ಮಾತ್ ಈ ಆರು ರಸಗಳನ್ನೂ ಮೀರಿದ ಏಳನೇ ರಸ ಇರಬಹುದೆಂದರೂ ನೀನು ಅದನ್ನೂ ಮೀರಿ **ಎಂಟನೇ ರಸ**ವಾಗಿದ್ದೀ. ಆದ್ದರಿಂದ ನಿನಗಿಂತ ಉತ್ತಮ ವಸ್ತು ಇರಲು ಸಾಧ್ಯವೇ ಇಲ್ಲ.

**ಬ್ರಹ್ಮೇಶ–ಶಕ್ರೋತ್ಕರಾಃ**—**ಬ್ರಹ್ಮ**–ಬ್ರಹ್ಮರುಗಳು, **ಈಶ**–ರುದ್ರರುಗಳು, **ಶಕ್ರ**–ದೇವೇಂದ್ರರುಗಳು ಇವರೇ, **ಉತ್ಕರಾಃ** –ಮೊದಲಾದವರು (ಅಥವಾ ಇವರೇ ಮೊದಲಾದ ದೇವತಾಸಮೂಹಗಳು) ; **ಯದ್ರೋಷೋ**.... ....**ಭಸಿತಾಃ**—**ಯತ್**–ಯಾವ ನಿನ್ನ, **ರೋಷ**–ಕೋಪದಿಂದ, **ಉತ್ಕರ**–ಕೆರಳಿದ, **ದಕ್ಷ**–ಸಮರ್ಥವಾದ (ಅಥವಾ ಬಲಭಾಗದ), **ನೇತ್ರ**–ಕಣ್ಣಿನ, **ಕುಟಿಲ**–ವಕ್ರವಾದ, **ಪ್ರಾಂತ**–ಅಂಚಿನಿಂದ (ಕೊನೆಯಿಂದ), **ಉತ್ಥಿತ**–ಉತ್ಪನ್ನವಾದ, **ಅಗ್ನಿ**–ಬೆಂಕಿಯ, **ಸ್ಫುರತ್**-ಪ್ರಜ್ವಲಿಸುತ್ತಿರುವ, **ಖದ್ಯೋತೋಪಮ**-ಸೂರ್ಯನಿಗೆ (ಅಥವಾ ಮಿಣುಕು ಹುಳುಗಳಿಗೆ) ಸಮಾನವಾದ, **ವಿಸ್ಫು (ಷ್ಫು) ಲಿಂಗ**–ಕಿಡಿಯ ಸಣ್ಣಸಣ್ಣ ಕಣಗಳಿಂದ, **ಭಸಿತಾಃ**–ಸುಟ್ಟು ಬೂದಿಯಾಗಿ ಹೋಗುವರು.

**ತಾತ್ಪರ್ಯ** — ಎಲೈ ಲಕ್ಷ್ಮೀರಮಣನಾದ ನರಸಿಂಹಸ್ವಾಮಿಯೇ ! ನಾನು ಭೂತಭವಿಷ್ಯದ್ವರ್ತಮಾನಗಳನ್ನೆಲ್ಲಾ ಹುಡುಕಿ ನೋಡಿದೆ ; **ವೇದ**

ವೇದಾಂಗಾದಿ ಸಕಲ ಚತುರ್ದಶಶಾಸ್ತ್ರಗಳನ್ನೆಲ್ಲಾ ಶೋಧಿಸಿ ನೋಡಿದೆ; ಆದರೆ ನಿನ್ನ ಸರಿಸಮಾನವಾದ ವಸ್ತುವನ್ನೇ ಎಲ್ಲೆಲ್ಲೂ ಕಾಣಲಿಲ್ಲ. ಹೀಗಿರುವಾಗ ನಿನಗಿಂತ ಉತ್ತಮವಾದ ವಸ್ತು ಇದ್ದೀತೆಂಬ ಮಾತಂತೂ ದೂರದಲ್ಲೇ ಅಡಗಿಹೋಯಿತು. ಏಕೆಂದರೆ ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದಂತೆ ಈ ಲೋಕದಲ್ಲಿ ಧರಾದೇವಿಗಿಂತ ಉತ್ತಮವಾದ, ಅದಕ್ಕಿಂತಲೂ ಹೆಚ್ಚು ಹೆಚ್ಚು ಶ್ರೇಷ್ಠವಾದ—ಸಾರಗಳೆಂಬ ಏಳು ವಸ್ತುಗಳಿವೆಯಾದರೂ, ಅವೆಲ್ಲವನ್ನೂ ದಾಟಿ ಅಳತೆಮೀರಿ ಶ್ರೇಷ್ಠವಾದ **ಎಂಟನೇ ರಸ** ನೀನೇ ಆಗಿದ್ದೀಯೆ. ಅಥವಾ ಲೋಕದಲ್ಲಿ ಸಿಹಿ, ಹುಳಿ, ಖಾರ ಎಂಬ ಆರು ರಸಗಳೇ ಪ್ರಸಿದ್ಧವಾಗಿವೆ. ಕದಾಚಿತ್ ಅವಕ್ಕೂ ಮಿಂಚಿದ ಏಳನೇ ರಸ ಇರಬಹುದೆಂದು ಕಲ್ಪಿಸಿಕೊಂಡರೂ ನೀನು ಅದಕ್ಕೂ ಮಿಗಿಲಾದ, ವಿಚಿತ್ರವಾದ, ಅನಿರ್ಧಾರ್ಯವಾದ **ಎಂಟನೇ ರಸ**ವಾಗಿದ್ದೀಯೆ.

ಹೇ ದೇವ, ನಿನ್ನ ಮಹಿಮೆಯನ್ನು ಎಷ್ಟೆಂದು ವರ್ಣಿಸಲಿ? ಪ್ರಳಯಕಾಲದಲ್ಲಿ ನಿನ್ನ ಒಂದು ಕಣ್ಣಿನ ತುಟ್ಟತುದಿಯಿಂದ ಉತ್ಪನ್ನವಾದ ಪ್ರಳಯಾಗ್ನಿಯ ಒಂದೊಂದು ಕಿಡಿಯೂ ಅನೇಕ ಸೂರ್ಯರಂತೆ ಪ್ರಕಾಶಿಸುತ್ತಾ ಮಿಣುಕುಹುಳುಗಳಂತೆ ಅಲ್ಲಲ್ಲಿ ಹಾರಾಡುತ್ತಿರುತ್ತವೆ. ಆ ಕಿಡಿಗಳಲ್ಲಿ ಒಂದು ಕಿಡಿಯೇ ಸಾಕು, ಸೃಷ್ಟಿಕರ್ತರೆಂದು ಪ್ರಸಿದ್ಧರಾದ ಬ್ರಹ್ಮರುಗಳನ್ನೂ, ಸಂಹಾರಕರ್ತರೆಂದು ಪ್ರಖ್ಯಾತರಾದ ರುದ್ರರುಗಳನ್ನೂ, ಸ್ವರ್ಗಾಧಿಪತಿಯೆಂದು ಹೆಸರಾಂತ ದೇವೇಂದ್ರರುಗಳನ್ನೂ ಹೀಗೆ ಸಕಲ ದೇವತಾಗಣಗಳನ್ನೂ ಸುಟ್ಟು ಭಸ್ಮ ಮಾಡಿಬಿಡುತ್ತದೆ. ಹೀಗಿರಲು ನಿನ್ನ ಸಾಮರ್ಥ್ಯ, ನಿನ್ನ ಬಲ, ನಿನ್ನ ಮಹಿಮೆ ಬೇರೆ ಯಾರಿಗಿರಲು ಸಾಧ್ಯ? ಸುತರಾಂ ಸಾಧ್ಯವಿಲ್ಲ. ಆದ್ದರಿಂದ ಸರ್ವೋತ್ತಮನೂ ಸರ್ವಶಕ್ತನೂ ಸರ್ವಸ್ವತಂತ್ರನೂ ಆದ ನೀನೇ ಏಕಮಾತ್ರನಾದ ಸರ್ವಲೋಕ ಸ್ವಾಮಿಯಾಗಿದ್ದೀಯೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು ಎಂಬುದೇ ಈ ಶ್ಲೋಕದ ಮುಖ್ಯಾಭಿಪ್ರಾಯ.

ನಖಸ್ತುತೇಸ್ತು ಭಾವಾರ್ಥಃ ಸರಲಾರ್ಥೋಕ್ತಿಪೂರ್ವಕಮ್ ।
ಕಥಿತೋ ವಿಷ್ಣುತೀರ್ಥೇನ ಮಧ್ವೇಶಃ ಪ್ರೀಯತಾಂ ಹರಿಃ ॥

**ನಖಸ್ತುತಿಯು ಮುಗಿಯಿತು**

# ಹರಿವಾಯುಸ್ತುತಿ ಪ್ರಾರಂಭ

## I ಪೀಠಿಕಾ ಭಾಗ (೧–೧೬ ಶ್ಲೋಕಗಳು)

**ಹರಿಃ ಓಂ ॥ ಶ್ರೀಮದ್-ವಿಷ್ಣ್ವಂಘ್ರಿನಿಷ್ಠಾ-ತಿಗುಣಗುರುತಮ-ಶ್ರೀಮದಾನಂದತೀರ್ಥ—ತ್ರೈಲೋಕ್ಯಾಚಾರ್ಯಪಾದೋ-ಜ್ಜ್ವಲ-ಜಲಜ-ಲಸತ್-ಪಾಂಸವೋಽಸ್ಮಾನ್ ಪುನಂತು ।**

---

**ಶ್ಲೋಕಗಳ ವಿಂಗಡಣೆ**—ಹರಿವಾಯುಸ್ತುತಿಯಲ್ಲಿ ನಲವತ್ತೊಂದು ಶ್ಲೋಕಗಳಿವೆ. ಇವನ್ನು ಸ್ಥೂಲವಾಗಿ ಐದು ಗುಂಪಾಗಿ ವಿಂಗಡಿಸಬಹುದು. (೧) ಮೊದಲನೆಯ ಹದಿನಾರು ಶ್ಲೋಕಗಳು ಪೀಠಿಕಾ ಭಾಗದಂತಿವೆ. (೨) ಮುಂದಿನ ಐದು ಶ್ಲೋಕಗಳು (೧೭ರಿಂದ ೨೧) ಹನುಮದವತಾರವನ್ನೂ, (೩) ಅದಕ್ಕೂ ಮುಂದಿನ ಏಳು ಶ್ಲೋಕಗಳು (೨೨ರಿಂದ ೨೮) ಭೀಮಾವತಾರವನ್ನೂ ವರ್ಣಿಸಿದರೆ (೪) ಕಡೆಯ ಹನ್ನೆರಡು ಶ್ಲೋಕಗಳು (೨೯ರಿಂದ ೪೦) ಮಧ್ವಾವತಾರದ ಹಿರಿಮೆಯನ್ನೂ ಹೇಳುತ್ತದೆ. (೫) ಕಟ್ಟಕಡೆಯ ನಲವತ್ತೊಂದನೆಯ ಶ್ಲೋಕವು ಫಲಶ್ರುತಿಯಂತಿದೆ. ಇನ್ನು ಪೀಠಿಕಾಭಾಗದ ಹದಿನಾರು ಶ್ಲೋಕಗಳ ಪೈಕಿ ಆರಂಭದ ನಾಲ್ಕು ಶ್ಲೋಕಗಳು ಶ್ರೀಮನ್ಮಧ್ವಾಚಾರ್ಯರ ಪಾದಧೂಳಿಯ ಮಹಿಮೆಯನ್ನೇ ವರ್ಣಿಸುತ್ತವೆ. ಈ ನಾಲ್ಕರ ಪೈಕಿ ಮೊದಲ ಎರಡು ಶ್ಲೋಕಗಳು ಸೇರಿ ಒಂದೇ ಅನ್ವಯ. **ಆನಂದತೀರ್ಥ** ಎಂಬುದು ಮಧ್ವಾಚಾರ್ಯರ ಇನ್ನೊಂದು ಹೆಸರು ; **ಮಧು** ಎಂದರೆ ಆನಂದವೆಂದೂ, **ವ** ಎಂದರೆ ತೀರ್ಥವೆಂದೂ ಅರ್ಥ ; ಹೀಗೆ ಮಧ್ವ ಎಂದರೂ ಆನಂದತೀರ್ಥ ಎಂದರೂ ಒಂದೇ ; ಅವರು ಆನಂದವನ್ನು ಕೊಡುವ ಶಾಸ್ತ್ರಗಳನ್ನು ರಚಿಸಿದ್ದರಿಂದ ಈ ಹೆಸರುಗಳು ಅವರಿಗೆ ಅನ್ವರ್ಥವಾಗಿವೆ.

ಅರ್ಥಕ್ಕೆ ಹೋಗುವುದಕ್ಕೆ ಮೊದಲು ವಾಯುಸ್ತುತಿಯನ್ನು ಪಠಿಸುವ ಕ್ರಮ ಹೇಗೆಂಬುದನ್ನು ತಿಳಿಸುವುದು ಅವಶ್ಯವಾಗಿದೆ. ಆದ್ದರಿಂದ ಅದಕ್ಕೆ ಉಪಯುಕ್ತವಾದ ವೃತ್ತದ ವಿಚಾರವಾಗಿ ಎರಡು ಮಾತು ಹೇಳುವೆನು.

**ವಾಚಾಂ ಯತ್ರ ಪ್ರಣೇತ್ರೀತ್ರಿಭುವನಮಹಿತಾ ಶಾರದಾ ಶಾರದೇಂದು-**
**ಜ್ಯೋತ್ಸ್ನಾ-ಭದ್ರಸ್ಮಿತಶ್ರೀ-ಧವಲಿತಕಕುಭಾ ಪ್ರೇಮಭಾರಂ ಬಭಾರ**
(ಪಾಠಾಂ. ಸ್ಮಿತಶ್ರೀಃ) ॥ ೧ ॥

---

ವೃತ್ತದ ವಿಚಾರ—ಈ ಸ್ತುತಿಯ ನಲವತ್ತೊಂದು ಶ್ಲೋಕಗಳೂ ಸ್ರಗ್ಧರಾ ವೃತ್ತದಲ್ಲಿ ರಚಿತವಾಗಿವೆ. ಪ್ರತಿಯೊಂದು ಪಾದದಲ್ಲೂ ಇಪ್ಪತ್ತೊಂದು ಅಕ್ಷರಗಳಿದ್ದು ಅವು ಏಳು-ಏಳು ಅಕ್ಷರಗಳ ಗುಂಪಾಗಿವೆ, ಈ ಪುಸ್ತಕದಲ್ಲಿ ಶ್ಲೋಕಗಳನ್ನು ಆ ರೀತಿಯಾಗಿಯೇ ಏಳು ಏಳು ಅಕ್ಷರಗಳ ಗುಂಪಾಗಿಯೇ ವಿಂಗಡಿಸಿಕೊಟ್ಟಿದೆ. ಈ ಸ್ತುತಿಯನ್ನು ಗುರುಮುಖೇನ ಕಲಿಯುವುದೇ ಶ್ರೇಷ್ಠ.

**5) ಶ್ಲೋ : ೧-ಳ ಮಧ್ವಾಚಾರ್ಯರ ಪಾದಧೂಳಿಯ ಮಹಿಮೆ.**

**೧ನೇ ಶ್ಲೋಕದ ಪ್ರಧಾನವಾಕ್ಯ**—ಶ್ರೀಮದಾನಂದತೀರ್ಥ....ಪಾದ-ಜಲಜ-ಲಸತ್ ಪಾಂಸವಃ (ಕರ್ತೃ) ಅಸ್ಮಾನ್ (ಕರ್ಮ) ಪುನಂತು (ಕ್ರಿಯೆ). ಮಧ್ವಾಚಾರ್ಯರ ಪಾದಕಮಲದ ಧೂಳಿಗಳು ನಮ್ಮನ್ನು ಪವಿತ್ರಮಾಡಲಿ.

**ಅನ್ವಯಾರ್ಥ**—ಶ್ರೀಮದ್ .... ಪಾಂಸವಃ — **ಶ್ರೀಮದ್**–ಮಂಗಳಕರನೂ ಸೌಭಾಗ್ಯಕರನೂ ಆದ, **ವಿಷ್ಣು**–ಶ್ರೀಮನ್ನಾರಾಯಣನ, **ಅಂಘ್ರಿ**–ಪಾದದ್ವಯದಲ್ಲಿ, **ನಿಷ್ಠಾ**–ನಿಶ್ಚಲವಾದ ಭಕ್ತಿಯೆಂಬ, **ಅತಿಗುಣ**–ವಿಶೇಷ ಗುಣದಿಂದ, **ಗುರುತಮ**–ಅತ್ಯಂತ ಶ್ರೇಷ್ಠ ಗುರುಗಳಾದ, **ಶ್ರೀಮದಾನಂದತೀರ್ಥ**–ಶ್ರೀಮನ್ಮಧ್ವಾಚಾರ್ಯರೆಂಬ, **ತ್ರೈಲೋಕ್ಯಾಚಾರ್ಯ**–ಮೂರು ಲೋಕಗಳಿಗೂ ಜಗದ್ಗುರುಗಳಾದವರ, **ಪಾದ**–ಪಾದಗಳೆಂಬ, **ಉಜ್ವಲ**–ಪ್ರಕಾಶಮಾನವಾದ, **ಜಲಜ**-ಕಮಲಗಳ, **ಲಸತ್**–ಪರಿಶೋಭಿಸುವ, **ಪಾಂಸವಃ**–ಧೂಳಿಗಳು ; **ಅಸ್ಮಾನ್**–(ಅವರ ಭಕ್ತರಾದ ಅಥವಾ ಪಾದಸೇವಕರಾದ)ನಮ್ಮನ್ನು ; **ಪುನಂತು**–ಪವಿತ್ರಗೊಳಿಸಲಿ (ಪರಿಶುದ್ಧರನ್ನಾಗಿಮಾಡಲಿ). **ಯತ್ರ**–ಯಾವ ಪಾದಧೂಳಿನಲ್ಲಿ ; **ವಾಚಾಂ ಪ್ರಣೇತ್ರೀ**–ಸಕಲ ಮಾತುಗಳಿಗೂ ಪ್ರೇರಕಳಾದ ; ತ್ರಿಭು....ಮಹಿತಾ—**ತ್ರಿಭುವನ**–ಮೂರು ಲೋಕಗಳಲ್ಲೂ ; **ಮಹಿತಾ**–ಪೂಜಿತಳಾದ ; ಶಾರದೇಂದು....ಕಕುಭಾ—**ಶಾರದ**–ಶರತ್ಕಾಲದ, **ಇಂದು**–ಹುಣ್ಣಿಮೆಯ ಚಂದ್ರನ, **ಜ್ಯೋತ್ಸ್ನಾ**–ಬೆಳದಿಂಗಳಂತೆ,

**ಉತ್ಕಂಠಾಕುಂಠಕೋಲಾ—ಹಲಜವ-ವಿದಿತಾ-ಜಸ್ರ ಸೇವಾನುವೃದ್ಧ-ಪ್ರಾಜ್ಞಾತ್ಮಜ್ಞಾನ ಧೂತಾಂ-ಧತಮಸ-ಸುಮನೋ-ಮೌಲಿರತ್ನಾ-ವಳೀನಾಮ್ ।**

---

**ಭದ್ರ**–ಮಂಗಳಕರವಾದ, **ಸ್ಮಿತ**–ಮುಗುಳುನಗೆಯ (ಮಂದಹಾಸದ), **ಶ್ರೀ**–ಸೊಬಗಿನಿಂದ (ಪಾಠಾಂ. ಶ್ರೀಃ–ಸೊಬಗು ಉಳ್ಳಂಥಾ); **ಧವಲಿತ**–ಬೆಳ್ಳಗೆ ಮಾಡಲ್ಪಟ್ಟ, **ಕಕುಭಾ**–ಹತ್ತು ದಿಕ್ಕುಗಳುಳ್ಳ; **ಶಾರದಾ**–ಭಾರತೀದೇವಿಯು; **ಪ್ರೇಮಭಾರಂ**–ಪ್ರೀತಿಯ ಹೊರೆಯನ್ನು, **ಬಭಾರ**–ಧರಿಸಿದಳು.

**ತಾತ್ಪರ್ಯ**—ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರೆಂಬ ಅಪರನಾಮಧೇಯವುಳ್ಳ ಶ್ರೀಮನ್ಮಧ್ವಾಚಾರ್ಯರು ಲಕ್ಷ್ಮೀಪತಿಯಾದ ಶ್ರೀ ಮಹಾವಿಷ್ಣುವಿನ ಅವಿಚ್ಛಿನ್ನ ಏಕಾಂತ ಭಕ್ತರು. ಅವರು ಯಾವ ಕಾಲಕ್ಕೂ ಶ್ರೀವಿಷ್ಣುವನ್ನಲ್ಲದೆ ಬೇರೆ ಯಾರನ್ನೂ ನೆನೆಯುವುದಿಲ್ಲ. ಅದೇ ಅವರ ಹಿರಿಮೆ. ಆದ್ದರಿಂದಲೇ ಅವರು ಮೂರು ಲೋಕಕ್ಕೂ ಜಗದ್ಗುರುಗಳಾಗಿ ತ್ರೈಲೋಕ್ಯಾಚಾರ್ಯರೆಂದು ಸನ್ಮಾನಿತರಾಗಿದ್ದಾರೆ. ಅವರು ಸರ್ವಥಾ ಪಾಪ ಲೇಪರಹಿತರಾಗಿ ಅಜ್ಞಾನಾದಿ ಸಕಲ ದೋಷದೂರರಾಗಿರುವುದರಿಂದ ಅತ್ಯಂತ ಪರಿಶುದ್ಧರಾಗಿದ್ದು ಪಾವನತಮ ಪುಣ್ಯಮೂರ್ತಿಗಳಾಗಿದ್ದಾರೆ. ಅವರಿರಲಿ, ಅವರ ಪಾದಕಮಲಗಳ ರಜೋಧೂಳಿಯೇ ಅತ್ಯಂತ ಪಾವನವಾದುದು. ಆದ ಕಾರಣವೇ ತ್ರೈಲೋಕ್ಯವಂದಿತಳಾದ ಸಕಲ ವಾಙ್ಮನೋನಿಯಾಮಕಳಾದ ಸಾಕ್ಷಾತ್ ಭಾರತೀದೇವಿಯೇ ಶ್ರೀಮದಾಚಾರ್ಯರ ಪಾದಧೂಳಿಯಲ್ಲಿ ಭಕ್ತಿ ಶ್ರದ್ಧಾದರಗಳ ದೊಡ್ಡ ಹೊರೆಯನ್ನೇ ಹೊತ್ತು ಶಿರಸಾ ವಹಿಸುತ್ತಾಳೆ. ಇಂಥಾ ಪವಿತ್ರತಮವಾದ ಶ್ರೀಮನ್ಮಧ್ವಾಚಾರ್ಯರ ಪಾದಧೂಳಿಯು ನಮ್ಮೆಲ್ಲರನ್ನೂ ಪವಿತ್ರಮಾಡಿ ಪರಿಶುದ್ಧಿಗೊಳಿಸಿ ಉದ್ಧಾರಮಾಡಲಿ ಎಂದು ತ್ರಿವಿಕ್ರಮಪಂಡಿತಾ ಚಾರ್ಯರು ಈ ಪ್ರಥಮ ಶ್ಲೋಕದಲ್ಲಿ ಪ್ರಾರ್ಥನೆಮಾಡಿದ್ದಾರೆ.

**ಶ್ಲೋಕ ೨**—(ಉತ್ಕಂಠಾ) ಈ ಶ್ಲೋಕದಲ್ಲೂ ಪಾದಧೂಳಿಯನ್ನೇ ವರ್ಣಿಸುತ್ತಾ ಅವನ್ನು ಕಂಡರೆ ರುದ್ರಾದಿ ದೇವತೆಗಳಿಗೆ ಎಷ್ಟು ಆದರ, ಎಷ್ಟು ಉತ್ಸಾಹ ಎಂಬುದನ್ನು ವಿವರಿಸುತ್ತಾರೆ.

**ಭಕ್ತ್ಯುದ್ರೇಕಾವಗಾಢ-ಪ್ರಘಟನ ಸಘಟಾತ್-ಕಾರಸಂಘೃಷ್ಯಮಾಣ-**
**ಪ್ರಾಂತಪ್ರಾಗ್ರ್ಯಾಂಘ್ರಿಪೀಠೋ-ತ್ಥಿತಕನಕರಜಃ-**
**ಪಿಂಜರಾರಂಜಿತಾಶಾಃ || ೨ ||**

---

**ಪ್ರಧಾನವಾಕ್ಯ**—ಸುಮನೋಮೌಲಿರತ್ನಾವಲೀನಾಂ ಪ್ರಘಟನ.... ಕನಕರಜಃ–ರಂಜಿತಾಶಾಃ—ದೇವತೆಗಳಲ್ಲಿರುವ ನವರತ್ನಗಳು ತಗುಲುವುದರಿಂದ ಬಂದ ಬಂಗಾರದ ಧೂಳಿನಿಂದ ದಿಕ್ಕುಗಳನ್ನೆಲ್ಲಾ ಕೆಂಪಗೆ ಮಾಡುವ ಪಾದ ಧೂಳಿಗಳೆಂದು ಮೊದಲನೇ ಶ್ಲೋಕದೊಡನೆ ಅನ್ವಯ ಮಾಡಬೇಕು.

**ಅನ್ವಯಾರ್ಥ**— ಉತ್ಕಂಠಾ....ರತ್ನಾವಳೀನಾಂ–**ಉತ್ಕಂಠ**–ಕಾತುರತೆಯಿಂದ, **ಅಕುಂಠ**–ಹೆಚ್ಚಾಗಿರುವ, **ಕೋಲಾಹಲ**–ಕೋಲಾಹಲದಿಂದಲೂ, **ಜವ**–ವೇಗದಿಂದಲೂ, **ವಿದಿತ**–ಗೊತ್ತಾಗುವ, **ಅಜಸ್ರ**–ನಿರಂತರವಾದ, **ಸೇವಾ**–ಸೇವೆಯಿಂದ, **ಅನುವೃದ್ಧ**–ಬೆಳೆದ, **ಪ್ರಾಜ್ಞಾತ್ಮ**–ಪರಮಾತ್ಮನ, **ಜ್ಞಾನ**–ಜ್ಞಾನದಿಂದ, **ಧೂತ**–ತೊಳೆಯಲ್ಪಟ್ಟ ಅಥವಾ ನಾಶಮಾಡಲ್ಪಟ್ಟ, **ಅಂಧತಮಸ**–ಅಜ್ಞಾನವೆಂಬ ಕತ್ತಲೆಯುಳ್ಳ, **ಸುಮನೋ-ಮೌಳಿ**–(ರುದ್ರಾದಿ) ದೇವತೆಗಳ ಕಿರೀಟಗಳಲ್ಲಿರುವ, **ರತ್ನಾವಲೀನಾಂ**–ನವರತ್ನಗಳ ಸಾಲುಗಳು ; ಭಕ್ತ್ಯ....ರಂಜಿತಾಶಾಃ–**ಭಕ್ತಿ-ಉದ್ರೇಕ**–ಭಕ್ತಿಯು ಉಕ್ಕುವುದರಿಂದ, **ಅವಗಾಢ**–ಬಲವಾಗಿ (ದೃಢವಾಗಿ), **ಪ್ರಘಟನ**–(ಕಟ್‌ಕಟ್ ಎಂದು) ಬಡಿಯುವುದರಿಂದ, **ಸಘಟಾತ್ಕಾರ**–ಹೆಚ್ಚು ಸದ್ದು ಬರುವಂತೆ, **ಸಂಘೃಷ್ಯಮಾಣ**–ತಿಕ್ಕಲ್ಪಡುತ್ತಿರುವ (ಘರ್ಷಣೆಯಾಗುತ್ತಿರುವ), **ಪ್ರಾಂತ**–ತುದಿಯುಳ್ಳ, **ಪ್ರಾಗ್ರ್ಯ**-ಶ್ರೇಷ್ಠವಾದ, **ಅಂಘ್ರಿಪೀಠ**–ಪಾದಗಳನ್ನು ಇಟ್ಟಿರುವ ಪೀಠದಿಂದ ಅಥವಾ ಪಾದುಕೆಗಳಿಂದ, **ಉತ್ಥಿತ**–ಮೇಲೆದ್ದ (ಹೊರಟ), **ಕನಕ**–ಬಂಗಾರದ, **ರಜಃ**–ಧೂಳುಗಳಿಂದ, **ಪಿಂಜರ**–ಹೊಂಗೆಂಪು ಬಣ್ಣದಿಂದ (ಅಥವಾ ಮಿಶ್ರಿತವಾದ), **ಆರಂಜಿತ**–ಕೆಂಪಾಗಿ ಕಾಣುವ, **ಆಶಾಃ**–ದಿಕ್ಕುಗಳುಳ್ಳ (ಲಸತ್-ಪಾಂಸವಃ ಎಂದು ಹೊಂದಿಸಬೇಕು).

**ತಾತ್ಪರ್ಯ**—ಶ್ರೀಮನ್ಮಧ್ವಾಚಾರ್ಯರ ಅನುಗ್ರಹವಿಶೇಷದಿಂದಲೇ ರುದ್ರಾದಿ ಸಕಲ ದೇವತೆಗಳಿಗೂ ಅಜ್ಞಾನ ನಾಶವಾಗಿ ಭಗವಂತ ಶ್ರೀವಿಷ್ಣುವಿನ ಸಮೀಚೀನಜ್ಞಾನ ಉಂಟಾಗಿದೆ. ಆದಕಾರಣ ಅವರೆಲ್ಲರಿಗೂ ಶ್ರೀಮದಾ

**ಜನ್ಮಾಧಿವ್ಯಾಧ್ಯುಪಾಧಿ-ಪ್ರತಿಹತಿವಿರಹ-ಪ್ರಾಪಕಾಣಾಂ ಗುಣಾನಾ(ಂ)-ಮ(ಅ)ಗ್ರ್ಯಾ-ಣಾಮರ್ಪಕಾಣಾಂ ಚಿರಮುದಿತ-ಚಿದಾ-ನಂದಸಂದೋಹ-ದಾನಾಮ್ ।**

---

ಚಾರ್ಯರ ಪಾದಕಮಲಗಳಿಗೆ ವಂದನೆ ಮಾಡುವುದೆಂದರೆ ಅತ್ಯಂತ ಕಾತುರತೆ, ಅತ್ಯಂತ ಆದರ ಮತ್ತು ಮಿತಿಮೀರಿದ ಶ್ರದ್ಧೆ. ಹೀಗಾಗಿ ಆಚಾರ್ಯರಿಗೆ ನಮಸ್ಕಾರ ಮಾಡಲು ಸಾಲುಹಿಡಿದು ಹೋಗುವಾಗಲೇ ಎಲ್ಲರೂ ನಾ ಮುಂದು ತಾ ಮುಂದೆಂದು ಆತುರದಿಂದಲೇ ಕೋಲಾಹಲ ಮಾಡುತ್ತಾ ಮುನ್ನುಗ್ಗುತ್ತಿರುತ್ತಾರೆ. ಈ ಪ್ರಕಾರ ಮೂವತ್ತುಮೂರು ಕೋಟಿ ದೇವತೆಗಳು ಅವಸರದಿಂದ ಸಾಲುಸಾಲಾಗಿ ಬಂದು ತಲೆ ಬಗ್ಗಿಸಿ ನಮಸ್ಕಾರಮಾಡುವಾಗ ಅವರು ತಲೆಯಲ್ಲಿ ಧರಿಸಿದ ನವರತ್ನಖಚಿತವಾದ ಕಿರೀಟಗಳು ಶ್ರೀಮದಾಚಾರ್ಯರು ಕುಳಿತ ಪೀಠಕ್ಕೆ (ಅಥವಾ ಅರ್ಥಾಂತರ ರೀತ್ಯಾ ಆಚಾರ್ಯರ ಪಾದುಕೆಗಳಿಗೆ) ತಗಲಿ-ತಗಲಿ ಇತ್ತ ಕಟ್-ಕಟ್ ಎಂದು ಸದ್ದು ಮಾಡುತ್ತಿರುತ್ತವೆ. ಅತ್ತ ಕಿರೀಟಗಳ ಬಂಗಾರದ ಹಳದೀಬಣ್ಣದ ಸಣ್ಣ ಹುಡಿಯೂ ನವರತ್ನಗಳ ನಾನಾಬಣ್ಣದ ಧೂಳೂ ಸೇರಿ ಬೆರತು ಸುತ್ತಲೂ ಹರಡಿಕೊಂಡು ಹತ್ತು ದಿಕ್ಕುಗಳನ್ನೂ ಕವಿದು ಮುಚ್ಚಿಬಿಡುತ್ತವೆ. ಆದರಿಂದ ಹತ್ತು ದಿಕ್ಕು ಹೊಂಗೆಂಪುಬಣ್ಣಮಯವಾಗಿ ಕಂಗೊಳಿಸುತ್ತವೆ. ಅಂಥಾ ಆಚಾರ್ಯರ ಪಾದಧೂಳು ನಮ್ಮನ್ನು ಪವಿತ್ರಗೊಳಿಸಲಿ ಎಂದು ಹಿಂದಿನ ಶ್ಲೋಕದೊಡನೆ ಸೇರಿಸಬೇಕು.

**ಶ್ಲೋಕ ೩**—(ಜನ್ಮಾಧಿ)-ಆಚಾರ್ಯರ ಪಾದಧೂಳಿನ ಮಹಿಮೆಯನ್ನು ನಾನು ಹೆಚ್ಚು ವರ್ಣಿಸಲಾರೆ ಎಂದು ಹೇಳಿ ಆ ವರ್ಣನೆಯನ್ನು ಮುಗಿಸುತ್ತಾರೆ.

**ಪ್ರಧಾನವಾಕ್ಯ**—ಏಷಃ (ಅಹಂ) ಏತೇಷಾಂ ಸಂಸ್ತವೇ ಶಕ್ತಃ ನಾಸ್ಮಿ-ಈ ನಾನು ಇವುಗಳನ್ನು ಹೆಚ್ಚು ಸ್ತುತಿಸಲು ಶಕ್ತನಲ್ಲ.

**ಅನ್ವಯಾರ್ಥ**—ಏಷಃ-ಈ ನಾನು ; ೧) ಜನ್ಮಾಧಿ....ಪ್ರಾಪಕಾಣಾಂ ಜನ್ಮ-ಹುಟ್ಟುವುದು, ಆಧಿ-ಮನೋರೋಗಗಳು (ಚಿಂತೆಗಳು), ವ್ಯಾಧಿ-ರೋಗರುಜಿನಗಳು ಇವುಗಳಿಗೆ, ಉಪಾಧಿ-ಕಾರಣವಾದ ಶರೀರವನ್ನು ಅಥವಾ

**ಏತೇಷಾಮೇಷ-ದೋಷ-ಪ್ರಮುಷಿತಮನಸಾಂ ದ್ವೇಷಿಣಾಂ ದೂಷ-ಕಾಣಾಂ ದೈತ್ಯಾನಾಮಾರ್ತಿಮಂಧೇ-ತಮಸಿ ವಿದಧತಾಂ ಸಂಸ್ತವೇ ನಾಸ್ಮಿ ಶಕ್ತಃ ॥ ೩ ॥**

---

ಕಾರಣವಾದ ಅವಿದ್ಯಾ-ಕಾಮ್ಯಕರ್ಮಗಳನ್ನು, **ಪ್ರತಿಹತಿ**-ನಾಶವನ್ನು (ಮರಣವನ್ನು) (ಅಥವಾ ನಾಶಮಾಡುವುದರಿಂದ), **ವಿರಹಪ್ರಾಪಕಾಣಾಂ**-ಕೊನೆಗಾಣಿಸುವಂಥಾ ; ೨) **ಅಗ್ರ್ಯಾಣಾಂ**-ಶ್ರೇಷ್ಠವಾದ ; **ಗುಣಾನಾಂ**-ಗುಣಗಳನ್ನು ; **ಅರ್ಪಕಾಣಾಂ**-ಕೊಡುವಂಥಾ ; ೩) **ಚಿರಂ**-ಚಿರಕಾಲ (ಶಾಶ್ವತವಾಗಿ) ; ಉದಿತ....ದಾನಾಂ—**ಉದಿತ**-ಅಭಿವ್ಯಕ್ತವಾದ, **ಚಿತ್**-ಜ್ಞಾನ, **ಆನಂದ**-ಸುಖ ಇವುಗಳ, **ಸಂದೋಹದಾನಾಂ**-ಸಮೂಹವನ್ನು ಕೊಡುವಂಥಾ ; ೪) ದೋಷ....ಮನಸಾಂ—**ದೋಷ**-ಅಜ್ಞಾನಾದಿ ದೋಷಗಳಿಂದ, **ಪ್ರಮುಷಿತ**-ಕಲುಷಿತವಾದ, **ಮನಸಾಂ**-ಮನಸ್ಸುಳ್ಳ ; **ದ್ವೇಷಿಣಾಂ**-ದ್ವೇಷಮಾಡುವಂಥಾ ; **ದೂಷಕಾಣಾಂ**-ನಿಂದಕರಾದ ; **ದೈತ್ಯಾನಾಂ**-ದೈತ್ಯರಿಗೆ ; **ಆರ್ತಿಂ**-ದುಃಖವನ್ನು ; (**ಚಿರಂ**-ಶಾಶ್ವತವಾಗಿ) ; **ಅಂಧೇ ತಮಸಿ**-ಅಂಧಂತಮಸ್ಸಿನಲ್ಲಿ ; **ವಿದಧತಾಂ**-ಕೊಡುವಂಥಾ ; **ಏತೇಷಾಂ**-ಈ ಪಾದಧೂಳಿಗಳನ್ನು ; **ಸಂಸ್ತವೇ**-ಸಮಗ್ರವಾಗಿ ಸ್ತೋತ್ರಮಾಡುವುದರಲ್ಲಿ ; **ಶಕ್ತಃ ನಾಸ್ಮಿ**-ಸಮರ್ಥನಲ್ಲ.

**ತಾತ್ಪರ್ಯ**—ಶ್ರೀಮದಾಚಾರ್ಯರ ಪಾದಧೂಳಿನ ಮಹಿಮೆಯೇ ಅಗಾಧವಾಗಿದೆ. ಯಾರು ಅವುಗಳನ್ನು ಭಕ್ತಿಯಿಂದ ಆರಾಧಿಸುತ್ತಾರೋ ಅಂಥಾ ಭಕ್ತಜನರಿಗೆ ಈ ಸಂಸಾರಸಾಗರದಲ್ಲಿ ಯಾವ ಯಾವ ವಿವಿಧ ಸಾಂಸಾರಿಕ ದುಃಖಗಳು—ಜನನ-ಮರಣ, ರೋಗರುಜಿನ, ಚಿಂತೆ-ವ್ಯಾಕುಲತೆಗಳೇ ಮೊದಲಾದ ಕಷ್ಟಾನಿಷ್ಟಗಳು ಒದಗುವುವೋ ಅಷ್ಟನ್ನೂ ನಿರ್ಮೂಲಮಾಡಿ, ಜ್ಞಾನಭಕ್ತ್ಯಾದಿ ಸದ್ಗುಣಗಳನ್ನು ಕೊಟ್ಟು, ಭಗವಂತನ ಅನುಗ್ರಹಕ್ಕೆ ಪಾತ್ರರನ್ನಾಗಿಮಾಡಿ, ಅವನ ಪ್ರಸಾದದಿಂದ ಮೋಕ್ಷವನ್ನೂ ಕೊಡಿಸಿ, ತಮ್ಮ-ತಮ್ಮ ಸ್ವರೂಪಭೂತ ಜ್ಞಾನಾನಂದವನ್ನು ಚಿರಕಾಲ ಅನುಭವಿಸುವಂತೆ ಮಾಡುತ್ತದೆ. ಅದಕ್ಕೆ ಪ್ರತಿಯಾಗಿ ಯಾರು ಅವುಗಳನ್ನು ದೂಷಿಸುತ್ತಾ ಅವುಗಳಲ್ಲಿ ದ್ವೇಷಮಾಡುತ್ತಾರೋ ಅಂಥಾ ದುಷ್ಟಸ್ವಭಾವದ ದೈತ್ಯರನು

## ತಮ್ಮ ಅಸಾಮರ್ಥ್ಯ ನಿವೇದನೆ

**ಅಸ್ಯಾವಿಷ್ಕರ್ತುಕಾಮಂ ಕಲಿಮಲಕಲುಷೇ-ಽಸ್ಮಿನ್ ಜನೇ**
**ಜ್ಞಾನಮಾರ್ಗಂ**
**ವಂದ್ಯಂ ಚಂದ್ರೇಂದ್ರರುದ್ರ—ದ್ಯುಮಣಿಫಣಿವಯೋ-**
**ನಾಯಕಾದ್ಯೈರಿಹಾದ್ಯ ।**

---

ಅಂಧಂತಮಸ್ಸುಗಳೆಂಬ ನಿತ್ಯನರಕಗಳಿಗೆ ತಳ್ಳಿ ಸುಖದ ಗಂಧವೂ ಇಲ್ಲದ ದುಃಖ ವನ್ನು ಶಾಶ್ವತವಾಗಿ ಅನುಭವಿಸುವಂತೆ ಮಾಡುತ್ತದೆ. ಇಂಥಾ ಅಪಾರವಾದ ಮಹಿಮೆಯುಳ್ಳ ಅವರ ಪಾದಧೂಳನ್ನು ಸಮಗ್ರವಾಗಿ ವರ್ಣಿಸಲು ನಾನು ಸರ್ವಥಾ ಸಮರ್ಥನಲ್ಲ.

**ಶ್ಲೋಕ ೪** (ಅಸ್ಯ) ಪಾದಧೂಳಿಯನ್ನೇ ಹೊಗಳಲು ಅಸಮರ್ಥನಾದ ನಾನು ಆ ವಾಯುದೇವರ ಮಹಿಮೆಯನ್ನು ಸ್ತುತಿಸಲು ಹೇಗೆ ಸಮರ್ಥನಾದೇನೆಂದು ತಮ್ಮ ಅಸಾಮರ್ಥ್ಯವನ್ನು ನಿವೇದಿಸಿಕೊಳ್ಳುತ್ತಾರೆ.

**ಪ್ರಧಾನವಾಕ್ಯ**—ಅಸ್ಯ ಮಾರುತಸ್ಯ (ಸಂಸ್ತವೇ ಶಕ್ತಃ ನಾಸ್ಮಿ ಇತಿ) ಕಿಮುತ ? = ಈ ವಾಯುದೇವರನ್ನು ಸ್ತುತಿಸಲು ಸಮರ್ಥನಲ್ಲವೆಂದು ಹೇಳುವುದೇನಿದೆ ? (ಹಿಂದಿನ ಶ್ಲೋಕದಿಂದ 'ಸಂಸ್ತವೇ ಶಕ್ತಃ ನಾಸ್ಮಿ' ಎಂಬ ಪದಗಳನ್ನು ಆವೃತ್ತಿಮಾಡಿಕೊಂಡು 'ಇತಿ' ಎಂಬ ಪದವನ್ನು ಅಧ್ಯಾಹಾರಮಾಡಿಕೊಂಡು ಅರ್ಥ ಹೇಳಬೇಕು).

**ಅನ್ವಯಾರ್ಥ**— ೧) (ಅ) **ಅದ್ಯ**–ಈಗ (ಈ ಕಲಿಯುಗದಲ್ಲಿ) ; **ಇಹ**-ಇಲ್ಲಿ (ಈ ಭೂಲೋಕದಲ್ಲಿ ಅಥವಾ ಭಾರತದೇಶದಲ್ಲಿ); ಕಲಿ....ಕಲುಷೇ— **ಕಲಿಮಲ**-ಕಲಿಯುಗದ ಪಾಪಗಳಿಂದ ಅಥವಾ ಅಜ್ಞಾನ-ಅನ್ಯಥಾ ಜ್ಞಾನಗಳಿಂದ, **ಕಲುಷೇ**-ದೂಷಿತರಾದ ; **ಅಸ್ಮಿನ್ ಜನೇ**–ಅಜ್ಞಾನಿಗಳಾದರೂ ಜ್ಞಾನಯೋಗ್ಯರಾದ ಈ ಅಧಿಕಾರಿ ಜನಗಳಲ್ಲಿ; **ಜ್ಞಾನಮಾರ್ಗಂ**–ತತ್ವಜ್ಞಾನದ ಮಾರ್ಗವನ್ನು (ಅಥವಾ ಪದ್ಧತಿಯನ್ನು) ; **ಆವಿಷ್ಕರ್ತುಕಾಮಂ**–ತೋರಿಸಿಕೊಡಬೇಕೆಂದು ಇಚ್ಛೆಯುಳ್ಳ ; (ಆ) ಚಂದ್ರೇಂದ್ರ....ನಾಯಕಾದ್ಯೈಃ — **ಚಂದ್ರ**–ಚಂದ್ರ, **ಇಂದ್ರ**–ದೇವೇಂದ್ರ, **ರುದ್ರ**–ಸದಾಶಿವ,

**ಮಧ್ವಾಖ್ಯಂ ಮಂತ್ರಸಿದ್ಧಂ ಕಿಮುತ ಕೃತವತೋ ಮಾರುತಸ್ಯ**
**ಅವತಾರಂ ಪಾತಾರಂ ಪಾರಮೇಷ್ಠ್ಯಂ ಪದಮಪವಿಪದಃ**
**ಪ್ರಾಪ್ತುರಾಪನ್ನಪುಂಸಾಮ್ || ೪ ||**

---

**ದ್ಯುಮಣಿ**–ಸೂರ್ಯ, **ಫಣಿ**–ಶೇಷದೇವರು, **ವಯೋನಾಯಕ**–ಪಕ್ಷಿಗಳ ಒಡೆಯನಾದ ಗರುಡ, **ಆದ್ಯೈಃ**–ಮೊದಲಾದ ದೇವತೆಗಳಿಂದ ; **ವಂದ್ಯಂ**–ನಮ್ಯರೂ ಸ್ತುತ್ಯರೂ ಆದ ; (ಇ) **ಆಪನ್ನಪುಂಸಾಂ**–ಆಪತ್ತುಗಳಿಗೆ ಸಿಕ್ಕಿರುವ (ಮತ್ತು ಮೊರೆಹೊಕ್ಕ) ಜನಗಳನ್ನು, **ಪಾತಾರಂ**–ರಕ್ಷಿಸುವಂಥಾ ; **(ಈ) ಮಂತ್ರಸಿದ್ಧಂ**–ಬಳಿತ್ಥಾದಿ ಸೂಕ್ತಗಳಿಂದ ಪ್ರತಿಪಾದ್ಯರಾದ ; **(ಉ) ಮಧ್ವಾಖ್ಯಂ ಅವತಾರಂ**–ಮಧ್ವಾಚಾರ್ಯರೆಂಬ ಅವತಾರವನ್ನು ; (ಅದ್ಯ, ಇಹ–ಮೇಲೆ ಹೇಳಿದಂತೆಯೇ ಅರ್ಥ ; **ಕೃತವತಃ**–ಮಾಡಿದಂಥಾ ; (ಊ) **ಅಪವಿಪದಃ**–ಜರಾಮರಣಾದಿಗಳೂ ಅಪಮೃತ್ಯುವೂ ಅಜ್ಞಾನ-ದೈತ್ಯಬಾಧೆ ಮೊದಲಾದ ವಿಪತ್ತುಗಳಿಂದ ದೂರರಾದ (ಆದ್ದರಿಂದ ಭಕ್ತರ ಅಜ್ಞಾನಾದಿ ದೋಷಗಳನ್ನೂ ದೂರಮಾಡುವಂಥಾ) ; (ಋ) **ಪಾರಮೇಷ್ಠ್ಯ ಪದಂ**-ಬ್ರಹ್ಮ ಪದವಿಯನ್ನು, **ಪ್ರಾಪ್ತುಃ**-ಹೊಂದುವಂಥಾ ; **ಮಾರುತಸ್ಯ**-ವಾಯು ದೇವರನ್ನು ; (ಸಂಸ್ತವೇ ಶಕ್ತಃ ನಾಸ್ಮಿ ಇತಿ)-ಸಮಗ್ರವಾಗಿ ಸ್ತುತಿಸಲು ಅಸಮರ್ಥನಾಗಿದ್ದೇನೆಂದು ; **ಕಿಮುತ**–ಹೇಳುವುದೇನಿದೆ ?

**ತಾತ್ಪರ್ಯ**—ಕಲಿಯುಗದ ಮಹಿಮೆಯಿಂದ ಬೌದ್ಧಾದಿ ದುರ್ಮತಗಳು ಪ್ರಬಲಿಸಿದ ಕಾರಣ ಜ್ಞಾನಯೋಗ್ಯರಾದ ಸಜ್ಜನರೂ ಕೂಡ ದುರ್ಮಾರ್ಗಾವಲಂಬಿಗಳಾದರು. ಅಂಥಾ ಯೋಗ್ಯ ಜನಗಳಿಗೆ ಸದ್ವೈಷ್ಣವ ಸಂಪ್ರದಾಯವನ್ನು ತೋರಿಸಿಕೊಟ್ಟು ಅವರನ್ನು ಉದ್ಧಾರಮಾಡುವುದಕ್ಕಾಗಿಯೇ ವಾಯುದೇವರು ಮಧ್ವಾವತಾರ ಮಾಡಿದರು. ಈ ವಿಚಾರವನ್ನು ಬಳಿತ್ಥಾದಿ ವೇದ ಮಂತ್ರಗಳೇ ಸಾರಿ ಹೇಳುತ್ತವೆ. ಈ ಮಧ್ವಾಚಾರ್ಯರನ್ನು ಮೊರೆಹೊಕ್ಕರೆ ಅವರು ಭಕ್ತರಿಗೆ ಬಂದ ಸಕಲ ವಿಪತ್ತುಗಳನ್ನೂ ಪರಿಹರಿಸಿ ಸಲಹುತ್ತಾರೆ. ಆದ್ದರಿಂದಲೇ ಮನುಷ್ಯರು ಮಾತ್ರವಲ್ಲ, ಗರುಡ ಶೇಷ ರುದ್ರೇಂದ್ರಾದಿ ಸಕಲ ದೇವತೆಗಳೂ ಅವರನ್ನು ಮೊರೆಹೊಕ್ಕು ಸ್ತುತಿಯನ್ನೂ ಮಾಡುತ್ತಾರೆ, ವಂದನೆ

## ಜ್ಞಾನ ಭಕ್ತಿಗಳಿಗಾಗಿ ವಿಜ್ಞಾಪನೆ (ಶ್ಲೋಕ ೫ ರಿಂದ ೮)

**ಉದ್ಯದ್ ವಿದ್ಯುತ್ ಪ್ರಚಂಡಾಂ ನಿಜರುಚಿನಿಕರ-ವ್ಯಾಪ್ತ-
ಲೋಕಾವಕಾಶೋ
ಬಿಭ್ರದ್ ಭೀಮೋ ಭುಜೇ ಯೋ ಽಭ್ಯುದಿತ ದಿನಕರಾ-
ಽಭಾಂಗದಾಢ್ಯ ಪ್ರಕಾಂಡೇ ।**

---

ಯನ್ನೂ ಮಾಡುತ್ತಾರೆ. ಇಂಥಾ ಮಧ್ವಾವತಾರಮಾಡಿದ ಮೂಲರೂಪಿ ವಾಯುದೇವರಿಗೆ ಜರಾಮರಣಾದಿ ಅನಿಷ್ಟಗಳಾಗಲಿ, ಅಪಮೃತ್ಯು, ಅಜ್ಞಾನ, ದೈತ್ಯಬಾಧಾದಿ ಯಾವ ವಿಪತ್ತೂ ಹತ್ತಿರಕ್ಕೂ ಸುಳಿಯುವಂತಿಲ್ಲ. ಅವರೇ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವವರಿದ್ದಾರೆ. ಇಂಥಾ ಮಹಾ ಮಹಿಮರಾದ ವಾಯುದೇವರನ್ನು ಸಮಗ್ರವಾಗಿ ಸ್ತುತಿಸಲು ಅಲ್ಪಮತಿಯೂ ಅಲ್ಪಜ್ಞನೂ ಆದ ನಾನು ಸಮರ್ಥನಾಗುವುದೆಲ್ಲಿಂದ ಬಂತು ?

**ಶ್ಲೋಕ ೫**—(ಉದ್ಯದ್ವಿದ್ಯುತ) ತಮ್ಮ ಅಸಾಮರ್ಥ್ಯವನ್ನು ನಿವೇದಿಸಿ ಕೊಂಡ ಬಳಿಕ ಕವಿತಾಸಾಮರ್ಥ್ಯಕ್ಕೆ ಕಾರಣೀಭೂತವಾದ ಸದ್ಬುದ್ಧಿಯನ್ನು ಕೊಡುವಂತೆ ಈ ಶ್ಲೋಕದಿಂದ ಪ್ರಾರ್ಥಿಸುತ್ತಾರೆ.

**ಪ್ರಧಾನವಾಕ್ಯ**—ಅಯಂ ವಾಯುದೇವಃ ಮೇ ಸುಮತಿಂ ವಿದಧ್ಯಾತ್-ಈ ವಾಯುದೇವರು ನನಗೆ ಸದ್ಬುದ್ಧಿಯನ್ನು ಕರುಣಿಸಲಿ.

**ಅನ್ವಯಾರ್ಥ**—(ಛಲಾರಿ ಟೀಕಾನುಸಾರಿ) **ಯಃ**-ಯಾವ ವಾಯು ದೇವರು (ಪೂರ್ವಂ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಹಿಂದೆ ಎಂದರೆ ದ್ವಾಪರಯುಗದಲ್ಲಿ) ; (ಕ) ಉದ್ಯದ್....ಚಂಡಾಂ—**ಉದ್ಯತ್**-ಆಗತಾನೇ ಹೊರಡುತ್ತಿರುವ, **ವಿದ್ಯುತ್**-ಸಿಡಿಲಿನಂತೆ, **ಪ್ರಚಂಡಾಂ**-ಘೋರವಾದ; (ಖ) **ವೀರ್ಯ-ಉದ್ಧಾರ್ಯಾಂ**-ಮಹಾ ಬಲಶಾಲಿಗಳಿಂದಲೇ ಎತ್ತಲು ಸಾಧ್ಯವಾಗಿದ್ದ ; **ಗದಾಗ್ರ್ಯಾಂ**-ಶ್ರೇಷ್ಠವಾದ ಗದೆಯನ್ನು; **ಅಭ್ಯುದಿತ**.... ಪ್ರಕಾಂಡೇ-**ಅಭ್ಯುದಿತ**-ಸ್ಪಷ್ಟವಾಗಿ ಉದಯಿಸಿದ, **ದಿನಕರ**-ಸೂರ್ಯನ, **ಆಭಾ**-ಪ್ರಕಾಶದಂತೆ ಪ್ರಜ್ವಲಿಸುವ, **ಅಂಗದೆ**-ತೋಳ್ಬಂದಿಗಳಿಂದ, **ಆಢ್ಯ**-

**ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ–ಮಯಮಿಹ ಸುಮತಿಂ**
**ವಾಯುದೇವೋ ವಿದಧ್ಯಾತ್-**
**ದ(ಅ)ಧ್ಯಾತ್ಮಜ್ಞಾನನೇತಾ ಯತಿವರಮಹಿತೋ ಭೂಮಿ-**
**ಭೂಷಾಮಣಿರ್ಮೇ || ೫ ||**

---

ಕೂಡಿದ, **ಪ್ರಕಾಂಡೇ**–ಹೆಗಲುಳ್ಳ (ಅಥವಾ ಅಂಗದ-ತೋಳ್ಬಂದಿಗಳುಳ್ಳವೂ, ಆಢ್ಯ–ಗಟ್ಟಿಮುಟ್ಟಾಗಿ ಬಲವಾಗಿರುವ, ಪ್ರಕಾಂಡೇ-ಮತ್ತು ಪ್ರಶಸ್ತವಾಗಿರುವ) **ಭುಜೇ**–ಬಾಹುವಿನಲ್ಲಿ (ತೋಳಿನಲ್ಲಿ; **ಬಿಭ್ರತ್**–ಧರಿಸಿದ; **ಭೀಮಃ**–(**ಅಭೂತ್**)-ಭೀಮನಾಗಿದ್ದನೋ; (ಸಃ-ಅಂಥಾ) (ಕ) ನಿಜ....ಕಾಶಃ—**ನಿಜ**–ತಮ್ಮ, **ರುಚಿ**–ಪ್ರಕಾಶದ, **ನಿಕರ**–ಸಮೂಹದಿಂದ, **ವ್ಯಾಪ್ತ**–ಆವರಿಸಲ್ಪಟ್ಟ, **ಲೋಕಾವಕಾಶಃ**–ಜಗತ್ಪ್ರದೇಶವುಳ್ಳ; (ಖ) **ಅಧ್ಯಾತ್ಮಜ್ಞಾನನೇತಾ**–ತತ್ವಶಾಸ್ತ್ರಪ್ರವಕ್ತರೂ, ಉಪದೇಷ್ಟೃಗಳೂ ಆದ; (ಗ) **ಯತಿವರಮಹಿತಃ**–ಯತಿಶ್ರೇಷ್ಠರಿಂದ ಪೂಜಿತರಾದ, (ಘ) ಭೂಮಿ....ಮಣಿಃ—**ಭೂಮಿ**–ಭೂಮಂಡಲಕ್ಕೆ, **ಭೂಷಾ**–ಅಲಂಕಾರವಾದ, **ಮಣಿಃ**–ಶಿರೋರತ್ನದಂತಿರುವ; **ಅಯಂ**–ಈ ಮಧ್ವರೂಪಿಯಾದ, **ವಾಯುದೇವಃ**–ವಾಯುದೇವರು; **ಮೇ**–ನನಗೆ, **ಇಹ**–ಇಲ್ಲಿ (ಈ ಸ್ತೋತ್ರವನ್ನು ರಚಿಸುವ ವಿಷಯದಲ್ಲಿ), **ಸುಮತಿಂ**–ಸದ್ಬುದ್ಧಿಯನ್ನು; (ಕವಿತಾಚಾತುರ್ಯವನ್ನು); **ವಿದಧ್ಯಾತ್**–ದಯಪಾಲಿಸಲಿ. (ಕವಿಕರ್ಣಾಮೃತ ಮತ್ತು ವಿಶ್ವಪತಿ ಟೀಕೆಗಳ ಅನ್ವಯಕ್ರಮ ಹೀಗಿದೆ—ನಿಜ....ಕಾಶಃ ಯಃ ವಾಯುದೇವ ಭೀಮಃ (ಸನ್) ಉದ್ಯದ್....ಪ್ರಚಂಡಾಂ ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ ಅಭ್ಯುದಿತ....**ಕಾಂಡೇ ಭುಜೇ ಬಿಭ್ರತ್** ಅಧ್ಯಾತ್ಮಜ್ಞಾನನೇತಾ,....ಮಣಿಃ (ನಃ) ಮೇ ಇಹ **ಸುಮತಿಂ ವಿದಧ್ಯಾತ್** || (ಅರ್ಥ ಮೇಲಿನಂತೆಯೇ).

**ತಾತ್ಪರ್ಯ**—ಈ ವಾಯುದೇವರು ತಮ್ಮ ಪ್ರಕಾಶದ ಕಿರಣಗಳ ಸಮೂಹದಿಂದ ಮೂರು ಲೋಕಗಳನ್ನೂ ಆವರಿಸಿದ್ದಾರೆ. ಇವರೇ ಹಿಂದೆ, ದ್ವಾಪರಯುಗದಲ್ಲಿ, ಭೀಮನಾಗಿ ಅವತಾರ ಮಾಡಿದ್ದರು. ಆಗ ಹತ್ತುಸಾವಿರ ಆನೆಗಳ ಬಲವುಳ್ಳ ಪ್ರಚಂಡವಾದ ಗದೆಯನ್ನು ತಮ್ಮ ಕೈಯಲ್ಲಿ ಧರಿಸಿದ್ದರು. ಆ ಗದೆ ಮಿಂಚಿನಂತೆ ಹೊಳೆಯುತ್ತಿತ್ತಲ್ಲದೆ ಸಿಡಿಲು ಬಡಿದರೆ ಹೇಗೆ ಎಲ್ಲರೂ

**ಸಂಸಾರೋತ್ತಾಪನಿತ್ಯೋಪಶಮದ ಸದಯ–ಸ್ನೇಹಹಾಸಾಂಬುಪೂರ–
ಪ್ರೋದ್ಯದ್ ವಿದ್ಯಾನವದ್ಯ ದ್ಯುತಿಮಣಿಕಿರಣ–ಶ್ರೇಣಿಸಂಪೂರಿತಾಶಃ**

---

ಸ್ತಬ್ಧರಾಗುವರೋ ಅದರಂತೆ ಒಂದು ಸಾರಿ ಪ್ರಯೋಗಿಸಿದರೇ ಸಾಕು, ಸಾವಿರಾರು ಆನೆ-ಕುದುರೆ-ರಥ-ಪದಾತಿ ಎಲ್ಲರನ್ನೂ ಧ್ವಂಸಮಾಡಿಬಿಡುತ್ತಿತ್ತು. ಇಂಥಾ ಪ್ರಚಂಡವಾದ ಗದೆಯನ್ನು ಧರಿಸಿದ ಆ ಭೀಮನನ ಬಾಹುಗಳು ತುಂಬಿ ಕೊಂಡು ಬಲಿಷ್ಠವಾಗಿದ್ದುವಲ್ಲದೆ ಆ ತೋಳುಗಳಲ್ಲಿ ಧರಿಸಿದ್ದ ತೋಳ್ಬಂದಿಗಳೂ ಕಡಗಗಳೂ ಮಿಂಚಿನಂತೆ ಹೊಳೆಯುತ್ತಿದ್ದುವು. ಹಿಂದೆ ಭೀಮನಾಗಿದ್ದ ವಾಯುದೇವರೇ ಈಗ ಕಲಿಯುಗದಲ್ಲಿ ಅಧ್ಯಾತ್ಮಜ್ಞಾನ ಪ್ರಚಾರಕ್ಕಾಗಿ ಮಧ್ವರಾಗಿ ಅವತಾರಮಾಡಿ ಸಂನ್ಯಾಸಿಶಿರೋಮಣಿಗಳಾಗಿ ಭೂಮಂಡಲಕ್ಕೇ ಅಲಂಕಾರಪ್ರಾಯರಾಗಿದ್ದಾರೆ. ಸನಕಾದಿ ಪರಮಹಂಸರಿಂದಲೂ ವಿಷ್ಣುತೀರ್ಥ-ಪದ್ಮನಾಭತೀರ್ಥಾದಿ ಯತಿಗಳಿಂದಲೂ ಪೂಜಿತರಾಗಿದ್ದಾರೆ. ಇಂಥಾ ಮಧ್ವ ರೂಪಿ ವಾಯುದೇವರು ನನಗೆ ಸದ್ಬುದ್ಧಿಯನ್ನೂ ಕವಿತಾಚಾತುರ್ಯವನ್ನೂ ಕರುಣಿಸಿ ಅನುಗ್ರಹಿಸಲಿ.

**ಶ್ಲೋಕ ೬**—(ಸಂಸಾರೋ) ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರನ್ನು ಕ್ಷೀರಸಮುದ್ರಕ್ಕೆ ಹೋಲಿಸಿ ಅವರಿಂದ ಆಧ್ಯಾತ್ಮಿಕಾದಿ ತಾಪತ್ರಯಗಳ ನಿವೃತ್ತಿ ಯಾಗಲೆಂದು ಪ್ರಾರ್ಥಿಸುತ್ತಾರೆ. ಇಲ್ಲಿ—ಶ್ರೀಮದಾನಂದತೀರ್ಥ ಕ್ಷೀರಾಂಭೋಧಿಃ ಮೇ ಅನಭಿಮತಂ ವಿಭಿಂದ್ಯಾತ್ = ಶ್ರೀಮದಾನಂದತೀರ್ಥರೆಂಬ ಕ್ಷೀರಸಮುದ್ರವು ನನ್ನ ಸಕಲಾನಿಷ್ಟಗಳನ್ನೂ ನುಚ್ಚುನುರಿಮಾಡಲಿ ಎಂಬುದೇ ಪ್ರಧಾನವಾಕ್ಯ.

**ಅನ್ವಯಾರ್ಥ**—೧) ಸಂಸ್‌ರೋ....ಪೂರಿತಾಶಃ—**ಸಂಸಾರ**–ಸಂಸಾರ ದಲ್ಲಿ ಉಂಟಾಗುವ, **ಉತ್ತಾಪ**–ತಾಪತ್ರಯಗಳಿಗೆ, **ನಿತ್ಯ**–ನಿರಂತರವಾಗಿ, **ಉಪಶಮದ**–ಉಪಶಾಂತಿಯನ್ನು ಕೊಡುವ, **ಸದಯ**–ಕೃಪಾಪೂರ್ಣವಾದ, **ಸ್ನೇಹ**–ಪ್ರೀತಿಯಿಂದ ಕೂಡಿದ, **ಹಾಸ**–ಮಂದಹಾಸವೆಂಬ, **ಅಂಬುಪೂರ**–ನೀರಿನಿಂದ ತುಂಬಿದ (ಕ್ಷೀರಾಬ್ಧಿಪರವಾದರೆ ಕ್ಷೀರವೆಂಬ ನೀರಿನಿಂದ ಕೂಡಿದ ಎಂದರ್ಥ), **ಪ್ರೋದ್ಯದ್**–ಉದಯಿಸುತ್ತಿರುವ, **ವಿದ್ಯಾ**–ವಿದ್ಯೆಗಳೆಂಬ, **ಅನವದ್ಯ**–ನಿರ್ದುಷ್ಟವಾದ, **ದ್ಯುತಿ**-ಪ್ರಕಾಶವುಳ್ಳ, **ಮಣಿ**–ರತ್ನಗಳ, **ಕಿರಣ**–

**ಶ್ರೀವತ್ಸಾಂಕಾಧಿವಾಸೋ-ಚಿತತರ-ಸರಲ-ಶ್ರೀಮದಾನಂದತೀರ್ಥ**
**ಕ್ಷೀರಾಂಭೋಧಿರ್ ವಿಭಿಂದ್ಯಾತ್ ಭವದನಭಿಮತಂ ಭೂರಿ ಮೇ**
**ಭೂತಿಹೇತುಃ** ॥ ೬ ॥

(ಪಾಠಾಂ. ಸರಲಃ)

---

ಕಿರಣಗಳ, **ಶ್ರೇಣಿ**–ಸಾಲುಗಳಿಂದ, **ಸಂಪೂರಿತ**-ತುಂಬಿದ, **ಆಶಃ**–ದಿಕ್ಕು ಗಳುಳ್ಳ, (ಕ್ಷೀರಾಬ್ಧಿಯ ಪಕ್ಷದಲ್ಲಿ–ದೋಷರಹಿತವಾದ ಕೌಸ್ತುಭಾದಿ ಮಣಿಗಳ (ರತ್ನಗಳ) ಕಿರಣಗಳ ಪಂಕ್ತಿಯಿಂದ ಎಲ್ಲ ದಿಕ್ಕಗಳನ್ನೂ ಮುಚ್ಚಿರುವ ಎಂದರ್ಥ) ೨) **ಭೂತಿಹೇತುಃ**–ಜ್ಞಾನಭಕ್ತ್ಯಾದಿ ಸಾಧನಸಂಪತ್ತಿಗೂ, ಧನಕನಕಾದಿ ಐಶ್ವರ್ಯದ ಸಂಪತ್ತಿಗೂ ಕಾರಣೀಭೂತರಾದ (ಕ್ಷೀರಸಮುದ್ರ ಪಕ್ಷದಲ್ಲಿ- ಲಕ್ಷ್ಮಿಯು ಹುಟ್ಟಿದ ಸ್ಥಾನವಾದಂಥಾ); ೩) ಶ್ರೀವತ್ಸಾಂ....ಕ್ಷೀರಾಂ ಭೋಧಿಃ–**ಶ್ರೀವತ್ಸಾಂಕ**–ಶ್ರೀವತ್ಸವೆಂಬ ಲಾಂಛನವನ್ನು ಧರಿಸಿದ ಶ್ರೀಹರಿಯು **ಅಧಿವಾಸ**–ನಿವಾಸಕ್ಕೆ, **ಉಚಿತತರ**–ಹೆಚ್ಚು ಯೋಗ್ಯವಾದ, **ಸರಲ**–ಶ್ರೇಷ್ಠ ವಾದ (ಕ್ಷೀರಾಬ್ಧಿಯ ಪಕ್ಷದಲ್ಲಿ–ನಾರಾಯಣನ ಆವಾಸಕ್ಕೆ ಯೋಗ್ಯವಾದ ಅನಂತಾಸನ ಶ್ವೇತದ್ವೀಪಗಳಿಗಿಂತಲೂ ಶ್ರೇಷ್ಠವಾದ), **ಶ್ರೀಮದಾನಂದತೀರ್ಥ ಕ್ಷೀರಾಂಭೋಧಿಃ**–ಶ್ರೀಮನ್ಮಧ್ವಾಚಾರ್ಯರೆಂಬ ಕ್ಷೀರಸಮುದ್ರವು, **ಮೇ**– ನನಗೆ, **ಭವತ್**–ಉಂಟಾಗುತ್ತಿರುವ; **ಭೂರಿ**-ಹೆಚ್ಚಾದ, **ಅನಭಿಮತಂ**– ಅನಿಷ್ಟವನ್ನು, **ವಿಭಿಂದ್ಯಾತ್**–ನುಚ್ಚುನುರಿಮಾಡಿಬಿಡಲಿ.

**ತಾತ್ಪರ್ಯ**—ಶ್ರೀಮದಾಚಾರ್ಯರ ಮಹಿಮೆ ಅಪಾರವಾದುದು– ಅಳತೆಗೆ ಮೀರಿದ್ದು ಎಂದು ಸೂಚಿಸುವುದಕ್ಕಾಗಿ ಅವರನ್ನೇ ಕ್ಷೀರಸಮುದ್ರವೆಂದು ಕಲ್ಪನೆಮಾಡಿ ಸ್ತುತಿಸುತ್ತಾರೆ. ಕ್ಷೀರಸಮುದ್ರವು ಬೆಳ್ಳಗಿರುವ ಸ್ವಚ್ಛವಾದ ಹಾಲಿನಿಂದ ಹೇಗೆ ತುಂಬಿ ತುಳುಕಾಡುತ್ತಿರುತ್ತದೋ ಹಾಗೆ ಇವರು ನಿರ್ಮಲ ವಾದ ಸ್ವಚ್ಛವಾದ ಮಂದಹಾಸದಿಂದ ಪರಿಶೋಭಿಸುತ್ತಿರುತ್ತಾರೆ. ಅಲ್ಲದೆ ಕ್ಷೀರಪಾನದಿಂದ ಹೇಗೆ ದಾಹ ಅಡಗಿ ಮನಸ್ಸಿಗೆ ಉಲ್ಲಾಸವಾಗುತ್ತದೋ ಹಾಗೆ ಇವರ ಮಂದಹಾಸವು ಭಕ್ತರ ಸಕಲವಿಧವಾದ ಸಾಂಸಾರಿಕ ತಾಪತ್ರಯಗಳನ್ನೂ ಉತ್ಕಟ ಕ್ಲೇಶಗಳನ್ನೂ ದೂರಮಾಡಿ ಮನಸ್ಸಿಗೆ ಶಾಂತಿಯನ್ನು ತಂದುಕೊಡು ತ್ತದೆ. ಕ್ಷೀರಸಮುದ್ರವು ಕೌಸ್ತುಭಮಣಿ ಚಿಂತಾಮಣಿಯೇ ಮೊದಲಾದ

**ಮೂರ್ಧನ್ಯೇಷೋಂಜಲಿರ್ಮೇ ದೃಢತರಮಿಹ ತೇ ಬಧ್ಯತೇ ಬಂಧಪಾಶ-**
**ಚ್ಛೇತ್ರೇ, ದಾತ್ರೇ ಸುಖಾನಾಂ ಭಜತಿ ಭುವಿ ಭವಿ-ಷ್ಯದ್**
**ವಿಧಾತ್ರೇ ದ್ಯುಭರ್ತ್ರೇ ।**

---

ಅಸಂಖ್ಯ ರತ್ನಗಳಿಗೆ ನಿಧಿಯಾಗಿದ್ದು ಆ ರತ್ನಗಳ ಹೊಳಪಿನಿಂದ ಜಗವುಗಿಸುತ್ತಿದ್ದರೂ ಹೇಗೆ ಗಂಭೀರವಾಗಿ ಕಾಣುತ್ತದೋ ಹಾಗೆಯೇ ಶ್ರೀಮದಾಚಾರ್ಯರು ಪರಿಶುದ್ಧವಾದ ವೇದಪುರಾಣೇತಿಹಾಸಾದಿ ನಾನಾವಿಧವಾದ ವಿದ್ಯೆಗಳ ಅಪಾರವಾದ ಭಂಡಾರದಂತಿದ್ದರೂ ಸದಾ ಪ್ರಸನ್ನರಾಗಿರುತ್ತಾರೆ. ಆ ವಿದ್ಯೆಯ ಪ್ರಭಾವದಿಂದಲೇ ಇವರ ಮುಖಕಾಂತಿಯು ದಶದಿಕ್ಕುಗಳಲ್ಲೂ ಜಗಮುಗಿಸುತ್ತಿರುತ್ತದೆ. ಶ್ರೀಮನ್ನಾರಾಯಣನು ಕ್ಷೀರಸಮುದ್ರದಲ್ಲಿ ಪವಡಿಸಿರುವಂತೆಯೇ ಶ್ರೀಮದಾನಂದತೀರ್ಥರ ಹೃದಯಕಮಲದಲ್ಲೂ ಸದಾ ನಲಿದಾಡುತ್ತಿರುತ್ತಾನೆ. ಕ್ಷೀರಸಮುದ್ರವು ಭಾಗ್ಯದೇವತೆಯಾದ ಲಕ್ಷ್ಮೀದೇವಿಗೆ ಜನ್ಮಸ್ಥಳವಾ (ತೌರುಮನೆಯಾ) ಗಿರುವಂತೆ ಶ್ರೀಮದಾಚಾರ್ಯರು ಸಕಲ ಭಾಗ್ಯಗಳಿಗೂ ಉತ್ಪತ್ತಿಸ್ಥಾನವಾಗಿದ್ದಾರೆ ; ಅವರ ಕೃಪಾದೃಷ್ಟಿಯಿಂದಲೇ ಧನ-ಕನಕಾದಿ ಐಹಿಕವಾದ ಸಕಲೈಶ್ವರ್ಯಗಳು ಮಾತ್ರವಲ್ಲದೆ ಜ್ಞಾನಭಕ್ತಿ ವೈರಾಗ್ಯಾದಿ ಸಮಸ್ತ ಪಾರಲೌಕಿಕ ಸಂಪತ್ತೂ ಸಹ ಯಥೇಚ್ಛವಾಗಿ ದೊರಕುತ್ತವೆ. ಹೀಗೆ ಅಗಾಧಮಹಿಮರಾದ ಶ್ರೀಮದಾನಂದತೀರ್ಥರು ನನಗೆ ಆಗಿಂದಾಗ್ಯೆ ಸಂಭವಿಸುವ ಸಕಲಾನಿಷ್ಟಗಳನ್ನೂ ನಿವೃತ್ತಿಮಾಡಿ ನನ್ನನ್ನು ರಕ್ಷಿಸಲಿ ಎಂದು ಭಾವ.

**ಶ್ಲೋಕ ೭**—(ಮೂರ್ಧನಿ) ಮುಕ್ತಿಗೆ ಸಾಧಕವಾದ ಹರಿಭಕ್ತಿಯನ್ನೂ ಗುರುಭಕ್ತಿಯನ್ನೂ ಕರುಣಿಸುವಂತೆ ಪ್ರಾರ್ಥಿಸುತ್ತಾರೆ.

**ಪ್ರಧಾನವಾಕ್ಯ**—ಈ ಶ್ಲೋಕದ ಪೂರ್ವಾರ್ಧವೇ ಬೇರೆ ವಾಕ್ಯ, ಉತ್ತರಾರ್ಧ ಇನ್ನೊಂದು ವಾಕ್ಯ. ಮೇ ಏಷಃ ಅಂಜಲಿಃ ತೇ ಬಧ್ಯತೇ-ನಾನು ನಿಮಗಾಗಿ ಕೈಜೋಡಿಸುತ್ತೇನೆ (ಪೂರ್ವಾರ್ಧ), ತ್ವಂ ಅಸ್ಮಾಕಂ ಮಾಧವಸ್ಯ ಅಥ ತೇ ಪದಯುಗೇ ಭಕ್ತಿಂ ಪ್ರದಿಶ=ನೀವು ನಮಗೆ ಆ ಮಾಧವನ ಪಾದದ್ವಯದಲ್ಲೂ ನಿಮ್ಮ ಪಾದದ್ವಯದಲ್ಲೂ ಭಕ್ತಿಯನ್ನು ಅನುಗ್ರಹಿಸಿರಿ ಎಂಬುದು (ಉತ್ತರಾರ್ಧದ) ಎರಡನೇ ವಾಕ್ಯ.

**ಅತ್ಯಂತಂ ಸಂತತಂ ತ್ವಂ ಪ್ರದಿಶ ಪದಯುಗೇ ಹಂತ ಸಂತಾಪ ಭಾಜಾ(ಂ)-**
**ಮ(ಅ)ಸ್ಮಾಕಂ ಭಕ್ತಿಮೇಕಾಂ ಭಗವತ ಉತ ತೇ ಮಾಧವಸ್ಯಾಥ ವಾಯೋಃ ॥ ೭ ॥**

---

**ಅನ್ವಯಾರ್ಥ**—(ಹೇ **ವಾಯೋ**–ಎಲೈ ವಾಯುದೇವರೇ ಎಂಬ ಸಂಬೋಧನಾಪದ ಅಧ್ಯಾಹಾರ ಮಾಡಿಕೊಳ್ಳಬೇಕು) **ಮೇ**–ನನ್ನ, **ಏಷಃ ಅಂಜಲಿಃ**–ಈ ಕೈಜೋಡಣೆ (ಜೋಡಿಸಿದ ಕೈ), ೧) **ಇಹ ಭುವಿ**–ಈ ಭೂಲೋಕದಲ್ಲಿ, **ಭಜತಿ**–ಸೇವಕಜನರ ವಿಷಯದಲ್ಲಿ, **ಬಂಧಪಾಶಚ್ಛೇತ್ರೇ**–ಸಂಸಾರದ ಬಂಧನವನ್ನು ಕಡಿದುಹಾಕುವವರೂ, ೨) **ಸುಖಾನಾಂ**-ಸ್ವರೂಪಾನಂದವನ್ನು, **ದಾತ್ರೇ**–ಕೊಡುವವರೂ, ೩) **ಭವಿಷ್ಯದ್ ವಿಧಾತ್ರೇ**–ಭಾವಿ ಬ್ರಹ್ಮರೂ, ೪) **ದ್ಯುಭರ್ತ್ರೇ**–ಭಾರತೀದೇವಿಯ ಪತಿಯೂ ಆದ, **ತೇ**–ನಿಮಗೋಸ್ಕರ, (ಮೇ–ನನ್ನ) **ಮೂರ್ಧನಿ**–ತಲೆಯಮೇಲೆ, **ಸಂತತಂ**–ನಿರಂತರವಾಗಿ, **ದೃಢತರಂ**–ಬಹಳ ಬಲವಾಗಿ, **ಬಧ್ಯತೇ**–ಕಟ್ಟಲ್ಪಡುತ್ತದೆ. **ಹಂತ**–ಹರ್ಷ, **ತ್ವಂ**–ನೀವು, **ಅತ್ಯಂತಂ**–ಬಹಳ ಹೆಚ್ಚಾಗಿ, **ಸಂತತಂ**–ನಿರಂತರವಾಗಿ, **ಸಂತಾಪಭಾಜಾಂ**–ಮನಃಕ್ಲೇಶಗಳಿಗೆ ಗುರಿಯಾದ, **ಅಸ್ಮಾಕಂ**–ನಮಗೆ, **ಭಗವತಃ**–ಭಗವಂತನಾದ, **ಮಾಧವಸ್ಯ**–ಲಕ್ಷ್ಮೀಪತಿಯಾದ ಶ್ರೀವಿಷ್ಣುವಿನ, **ಪದಯುಗೇ**–ಪಾದದ ಯದಲ್ಲೂ, **ಅಥ**–ಅನಂತರ, **ವಾಯೋಃ ತೇ**–ವಾಯುದೇವರಾದ ನಿಮ್ಮ, (ಪದಯುಗೇ–ಪಾದದ್ವಯದಲ್ಲೂ), **ಉತ**–ಕೂಡ, **ಏಕಾಂ**–ಅನನ್ಯವಾದ, **ಭಕ್ತಿಂ**–ಭಕ್ತಿಯನ್ನು, **ಪ್ರದಿಶ**–ಅನುಗ್ರಹಿಸಿರಿ.

**ತಾತ್ಪರ್ಯ**—ಹೇ ವಾಯುದೇವರೇ! ನಾವೆಲ್ಲರೂ ಅನಾದಿಯಾಗಿ ಅಂಟಿಕೊಂಡು ಬಂದ ಅವಿದ್ಯೆಯ ಫಲವಾಗಿ ಕಾಮ್ಯಕರ್ಮಗಳೆಂಬ ಬಂಧನಕ್ಕೆ ಸಿಕ್ಕಿಬಿದ್ದು ಸಂಸಾರಸಾಗರದಲ್ಲಿ ತೊಳಲಾಡುತ್ತಿದ್ದೇವೆ. ನಮ್ಮನ್ನು ಈ ಬಂಧನದಿಂದ ಬಿಡಿಸಿ ಪಾರುಮಾಡುವುದಕ್ಕೆ ನಿಮ್ಮಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ. ಇದನ್ನು ತಿಳಿದೇ ನಿಮ್ಮನ್ನೇ ನಂಬಿ ನನ್ನ ಕೈಗಳನ್ನು ಬಲವಾಗಿ ಜೋಡಿಸಿ ತಲೆಯಮೇಲಿಟ್ಟುಕೊಂಡು ನಿಮ್ಮಲ್ಲಿ ಶರಣಾಗತನಾಗಿ ಬಂದು

**ಸಾಭ್ರೋಷ್ಣಾಭೀಶು-ಶುಭ್ರ-ಪ್ರಭಮಭಯ ನಭೋ**
**ಭೂರಿಭೂಭೃದ್ವಿಭೂತಿ-**
**ಭ್ರಾಜಿಷ್ಣುರ್ ಭೂರ್ಋಭೂಣಾಂ ಭವನಮಪಿ ವಿಭೋ**
**ಽಭೇದಿ ಬಭ್ರೇ ಬಭೂವೇ ।**

---

ಅಂಗಲಾಚಿ ಬೇಡಿಕೊಳ್ಳುತ್ತೇನೆ, ಪ್ರಭೋ, ಭಾರತೀರಮಣ ಮುಖ್ಯಪ್ರಾಣ! ಭಾವಿ ಬ್ರಹ್ಮದೇವ! ನನ್ನ ಬೇಡಿಕೆಯನ್ನು ಲಾಲಿಸಿರಿ. ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಪಾದದ್ವಯದಲ್ಲೂ ಅನಂತರ ಜಗದ್ಗುರುಗಳಾದ ತಮ್ಮ ಚರಣಯುಗಳದಲ್ಲೂ ತಾರತಮ್ಯಾನುಸಾರ ಅನನ್ಯಭಕ್ತಿಯನ್ನು ಸ್ಥಿರವಾಗಿ ಅನುಗ್ರಹಮಾಡಿರಿ.

**ಶ್ಲೋಕ ೮**—(ಸಾಭ್ರೋಷ್ಣಾ) ವಾಯುದೇವರ ಭೂವಿಭ್ರಮದ (ಹುಬ್ಬು ಚಲಿಸುವುದರ) ಮಹಿಮೆಯನ್ನು ವರ್ಣಿಸಿ ಮಾಯಿಭಿಕ್ಷುಗಳಿಂದ ರಕ್ಷಿಸುವಂತೆ ಯಾಚಿಸುತ್ತಾರೆ.

**ಪ್ರಧಾನವಾಕ್ಯ**—ಯೇನ ನಭಃ ಭೂಃ ಋಭೂಣಾಂ ಭವನಮಪಿ ಅಭೇದಿ ಬಭ್ರೇ ಬಭೂವೇ (ಸಃ) ತೇ ಭೂವಿಭ್ರಮಃ ಮಾಯಿಭಿಕ್ಷೂನ್ ಭ್ರಮಯತು=ಯಾವುದರಿಂದ ಆಕಾಶವೂ ಭೂಮಿಯೂ ಸ್ವರ್ಗಲೋಕವೂ ನಾಶಮಾಡಲ್ಪಟ್ಟಿತೋ ಧರಿಸಲ್ಪಟ್ಟಿತೋ ಮತ್ತು ಸೃಷ್ಟಿಸಲ್ಪಟ್ಟಿತೋ ಅಂಥಾ ನಿಮ್ಮ ಹುಬ್ಬಿನ ಚಲನೆಯು ವಂಚಕರಾದ ಸಂನ್ಯಾಸಿಗಳನ್ನು ಭ್ರಾಂತಿಗೊಳಿಸಲಿ.

**ಅನ್ವಯಾರ್ಥ**—**ಅಭಯ**–ಭಯರಹಿತನೂ, **ವಿಭೋ**–ಸರ್ವಸ್ವಾಮಿಯೂ ಆದ ಹೇ ವಾಯುದೇವರೇ! ಸಾಭ್ರೋಷ್ಣಾ....ಪ್ರಭಂ—(ಪ್ರಾರಂಭದಲ್ಲಿರುವ ಸ ಎಂಬುದನ್ನು ಕಡೆಯಲ್ಲಿ ಸೇರಿಸಿಕೊಂಡು ಅರ್ಥ ಹೇಳಬೇಕು) ಅಭ್ರ–ಮೋಡಗಳು, **ಉಷ್ಣ**–ಬಿಸಿಯಾದ, **ಅಭೀಶು**–ಕಿರಣಗಳುಳ್ಳ (ಉಷ್ಣಾಭೀಶು) ಸೂರ್ಯನೂ, **ಶುಭ್ರಪ್ರಭಂ**–ನಿರ್ಮಲವಾದ ಕಾಂತಿಯುಳ್ಳ ಚಂದ್ರ—ಇವರುಗಳಿಂದ, ಸ–ಕೂಡಿದ, **ನಭಃ**–ಆಕಾಶವೂ, **ಭೂರಿ....ಭ್ರಾಜಿಷ್ಣುಃ**–**ಭೂರಿ**–ಹೆಚ್ಚಾದ, **ಭೂಭೃತ್**–ರಾಜರ ಅಥವಾ ಬೆಟ್ಟಗಳ, **ವಿಭೂತಿ**–ಸಂಪತ್ತಿನಿಂದ, **ಭ್ರಾಜಿಷ್ಣುಃ**–ಪರಿಶೋಭಿಸುವ, **ಭೂಃ**–ಭೂಮಿಯೂ **ಋಭೂಣಾಂ**–ದೇವತೆಗಳ, **ಭವನಂ ಅಪಿ**–ಮನೆಯಾದ ಸ್ವರ್ಗಲೋಕವೂ,

**ಯೇನ ಭ್ರೂವಿಭ್ರಮಸ್ತೇ ಭ್ರಮಯತು ಸುಭೃಶಂ ಬಭ್ರುವದ್ ದುರ್ಭೃತಾಶಾನ್**
**ಭ್ರಾಂತಿರ್ ಭೇದಾವಭಾಸಸ್-ತ್ವಿತಿ ಭಯಮಭಿಭೂರ್ ಭೋಕ್ಷತೋ ಮಾಯಿಭಿಕ್ಷೂನ್ ॥ ೮ ॥**

---

**ಯೇನ**-ಯಾವ ನಿಮ್ಮ ಭ್ರೂ (ಹುಬ್ಬಿನ) ವಿಲಾಸದಿಂದ, **ಅಭೇದಿ**-ನಾಶ ಮಾಡಲ್ಪಟ್ಟಿತೋ, **ಬಭ್ರೇ**-ಧರಿಸಲ್ಪಟ್ಟಿತೋ ಮತ್ತು, **ಬಭೂವೇ**-ಸೃಷ್ಟಿಸಲ್ಪಟ್ಟಿತೋ, (**ಸಃ**-ಅಂಥಾ), **ತೇ**-ನಿಮ್ಮ, **ಅಭಿಭೂಃ**-(ಶತ್ರುಗಳನ್ನು) ಪರಾಭವಗೊಳಿಸುವಂಥಾ, **ಭ್ರೂವಿಭ್ರಮಃ**-ಹುಬ್ಬಿನ ವಿಲಾಸವು (ಹುಬ್ಬು ಅಲ್ಲಾಡಿಸುವಿಕೆಯು) **ಬಭ್ರುವತ್**-ಬೆಕ್ಕಿನಂತೆ, **ದುರ್ಭೃತಾಶಾನ್**-ಅರ್ಹತೆಯಿಲ್ಲದ ವಸ್ತುಗಳಿಗಾಗಿ ಆಶೆಪಡುತ್ತಿರುವ, (ಖ) **ಭೇದಾವಭಾಸಃ**-ಪಂಚಭೇದಜ್ಞಾನವು, **ಭ್ರಾಂತಿಃ ತು ಇತಿ**-ಕೇವಲ ಭ್ರಮೆ ಎಂದು ವಾದಿಸುವ, (ಗ) **ಭಯಂಭೋಕ್ಷ್ಯ**ತಃ-ಭಯವನ್ನು ಅನುಭವಿಸುತ್ತಿರುವ, **ಮಾಯಿ-ಭಿಕ್ಷೂನ್**-ಮಾಯಾವಾದಿ ಸಂನ್ಯಾಸಿಗಳನ್ನು, **ಸುಭೃಶಂ**-ಅತ್ಯಧಿಕವಾಗಿ, **ಭ್ರಮಯತು**-ಮೋಹಗೊಳಿಸಲಿ.

**ತಾತ್ಪರ್ಯ**—ಹೇ ಭಯರಹಿತರಾದ ವಾಯುದೇವರೇ! ನೀವು ಒಂದು ಸಾರಿ ಹುಬ್ಬು ಅಲ್ಲಾಡಿಸಿದರೆ ಸಾಕು, ಆಕಾಶ ಭೂಮಿ ಸ್ವರ್ಗವೆಂಬ ಮೂರು ಲೋಕಗಳ ಸೃಷ್ಟಿ-ಸ್ಥಿತಿ-ಲಯಾದಿಗಳೆಲ್ಲ ನಡೆದುಹೋಗುತ್ತವೆ. ನಾನು ಆತ್ಮ ರಕ್ಷಣೆಗಾಗಿ ಆ ನಿಮ್ಮ ಭ್ರೂವಿಲಾಸವನ್ನೇ ಆಶ್ರಯಿಸಿ ಬಂದಿದ್ದೇನೆ. ಏಕೆಂದರೆ ಅಯೋಗ್ಯರಾದ ಅನೇಕ ಕಪಟ ಸಂನ್ಯಾಸಿಗಳು ನನ್ನನ್ನು ವಂಚಿಸಿ ದುರ್ಮಾರ್ಗಕ್ಕೆ ಎಳೆಯಲು ಹವಣಿಸುತ್ತಿದ್ದಾರೆ. ಬೆಕ್ಕು ತನಗೆ ಸಲ್ಲದ ಹೋಮದ ಹವಿಸ್ಸನ್ನು ತಿನ್ನಲು ಹೊಂಚುಹಾಕುವಂತೆ ಈ ಮಾಯಾವಾದಿ ಸಂನ್ಯಾಸಿಗಳು ತಮಗೆ ಸಲ್ಲಲು ಸರ್ವಥಾ ಅಸಾಧ್ಯವಾದ ಪರಬ್ರಹ್ಮತ್ವವನ್ನೇ ತಮ್ಮಲ್ಲಿ ಆರೋಪಮಾಡಿಕೊಂಡು, ಸ್ವಯಂಸಿದ್ಧವಾದ ಪಂಚಭೇದ-ತಾರತಮ್ಯಗಳೆಲ್ಲ ಸುಳ್ಳೆಂದೂ ಸತ್ಯವಾದ ಜಗತ್ತು ಕಪ್ಪೆಚಿಪ್ಪಿನಲ್ಲಿ ಕಾಣುವ ಬೆಳ್ಳಿಯಂತೆ ಕೇವಲ ಭ್ರಮೆಯೆಂದೂ ವಾದಿಸುತ್ತಾರೆ. ನಿಮ್ಮ ಭ್ರೂವಿಲಾಸ ಅವರಿಗೆ ಆ ಭ್ರಮೆಯೇ ಸ್ಥಿರವಾಗುವಂತೆ ಮಾಡಿ ನಾನು ಆ ಭ್ರಮೆಗೆ ಒಳಗಾಗದೆ ಪಾರಾಗುವಂತೆ ರಕ್ಷಿಸಲಿ.

## ಭಕ್ತಿಯಿಂದ ದೊರಕುವ ಮೋಕ್ಷಸೌಖ್ಯದ ವರ್ಣನೆ
## ( ಶ್ಲೋಕ ೯ ರಿಂದ ೧೦ )

**ಯೇಽಮುಂ ಭಾವಂ ಭಜಂತೇ ಸುರಮುಖಸುಜನಾ-ರಾಧಿತಂ ತೇ ತೃತೀಯಂ**
**ಭಾಸಂತೇ ಭಾಸುರೈಸ್ತೇ ಸಹಚರಚಲಿತೈ-ಶ್ಚಾಮರೈಶ್ಚಾರುವೇಷಾಃ ।**

---

**ಶ್ಲೋಕ ೯**—(ಯೇಽಮುಂ) ಹರಿವಾಯುಗಳಲ್ಲಿ ಭಕ್ತಿಯನ್ನು ಹುಟ್ಟಿಸುವುದಕ್ಕಾಗಿ ಮೊದಲ ಈ ಎರಡು ಶ್ಲೋಕಗಳಲ್ಲಿ ಅವರನ್ನು ಆರಾಧಿಸುವ ಭಕ್ತರು ವೈಕುಂಠಕ್ಕೆ ತೆರಳಿ ಪಡೆಯುವ ನಾನಾ ಬಗೆಯ ಸುಖಸಂಪತ್ತನ್ನು ವರ್ಣಿಸಿ ಮುಂದಿನ ಮೂರು ಶ್ಲೋಕಗಳಲ್ಲಿ (೧೧–೧೩) ಅವರಲ್ಲಿ ದ್ವೇಷಮಾಡುವವರು ಅನುಭವಿಸುವ ಘೋರ ದುಃಖವನ್ನೂ ವರ್ಣಿಸುವರು.

**ಪ್ರಧಾನವಾಕ್ಯ**—ಯೇ ತೇ ತೃತೀಯಂ ಭಾವಂ ಭಜಂತೇ, ತೇ (ಭಾಸುರೈಸ್ತೇ ಎಂಬಲ್ಲಿರುವ **ತೇ**) ವೈಕುಂಠೇ **ಭಾಸಂತೇ**-ಯಾರು ನಿಮ್ಮ ಮೂರನೆಯ ಅವತಾರವನ್ನು (ಮಧ್ವಾಚಾರ್ಯರನ್ನು) ಸೇವಿಸುತ್ತಾರೋ ಅವರು ವೈಕುಂಠದಲ್ಲಿ ಸುಖಪಡುತ್ತಾರೆ.

**ಅನ್ವಯಾರ್ಥ**—(ಸೂಚನೆ—ಸುರ....ರಾಧಿತಂ ಎಂಬುದನ್ನು ಒಂದೇ ಪದವಾಗಿಯೂ, ಸುರಮುಖ, ಸುಜನಾರಾಧಿತಂ ಎಂದು ಎರಡು ಪದವಾಗಿಯೂ ಗ್ರಹಣ ಮಾಡಬಹುದು.) **ಹೇ ಸುರಮುಖ**–ಎಲೈ ರುದ್ರಾದಿ ದೇವತೆಗಳಿಗಿಂತ ಶ್ರೇಷ್ಠರಾದ ವಾಯುದೇವರೇ! ಸುರ....ರಾಧಿತಂ—(**ಸುರ**–ರುದ್ರಾದಿ ದೇವತೆಗಳೇ, **ಮುಖ**–ಮೊದಲಾದ **ಸುಜನ**–ಮುಕ್ತಿಯೋಗ್ಯ ಜನರಿಂದ, **ಆರಾಧಿತಂ**–ಆರಾಧಿಸಲ್ಪಟ್ಟ, **ತೇ**–ನಿಮ್ಮ, **ತೃತೀಯಂ**–ಮೂರನೆಯ, **ಅಮುಂ**–ಈ, **ಭಾವಂ**–ಅವತಾರವಾದ ಮಧ್ವಾಚಾರ್ಯರನ್ನು, **ಭಜಂತೇ**–ಸೇವಿಸುತ್ತಾರೋ, **ತೇ**–ಅವರು, (ಅ) **ಭಾಸುರೈಃ**–ಹೊಳೆಯುತ್ತಿರುವ, **ಸಹಚರಚಲಿತೈಃ**–ಸೇವಕರು ಬೀಸುತ್ತಿರುವ, **ಚಾಮರೈಃ**–ಚಾಮರಗಳಿಂದ (ಸೇವ್ಯಮಾನಾಃ–ಸೇವಿಸಲ್ಪಡುವರಾಗಿ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು). (ಆ) **ಚಾರುವೇಷಾಃ**–ಸುಂದರವಾದ ರೂಪವುಳ್ಳವರಾಗಿ

**ವೈಕುಂಠೇ ಕಂಠಲಗ್ನ-ಸ್ಥಿರಶುಚಿವಿಲಸತ್-ಕಾಂತಿತಾರುಣ್ಯ-ಲೀಲಾ-
ಲಾವಣ್ಯಾಪೂರ್ಣಕಾಂತಾ-ಕುಚಭರಸುಲಭಾ-ಶ್ಲೇಷ-
ಸಮ್ಮೋದಸಾಂದ್ರಾಃ ॥ ೯ ॥**

---

(ಅಥವಾ ಸುಂದರವಾದ ವೇಷಭೂಷಣಗಳನ್ನು ಧರಿಸಿದವರಾಗಿ), (ಇ) ಕಂಠ-ಲಗ್ನ....ಸಾಂದ್ರಾಃ—**ಕಂಠ**-ಕುತ್ತಿಗೆಯಲ್ಲಿ, **ಲಗ್ನ**-ಹಾಕಿದ, **ಸ್ಥಿರ**-ನಿಶ್ಚಲವಾದ, **ಶುಚಿ**-ನಿರ್ಮಲವಾದ, **ವಿಲಸತ್**-ಪ್ರಕಾಶಿಸುವ, **ಕಾಂತಿ**-ದೇಹಕಾಂತಿಯಿಂದಲೂ, **ತಾರುಣ್ಯ**-ಯೌವನದಿಂದಲೂ, **ಲೀಲಾ**-ವಿಲಾಸದಿಂದಲೂ, **ಲಾವಣ್ಯ**-ಸೊಬಗಿನಿಂದಲೂ, **ಆಪೂರ್ಣ**-ಚೆನ್ನಾಗಿ ತುಂಬಿದ, **ಕಾಂತಾ**-ಸ್ತ್ರೀಯ (ಅಂಗನೆಯ), **ಸ್ತನಭರ**-ಸ್ತನಭಾರದಿಂದ, **ಸುಲಭ**-ಅನಾಯಾಸವಾದ, **ಆಶ್ಲೇಷ**-ಆಲಿಂಗನದಿಂದ ಲಭಿಸುವ, **ಸಂಮೋದ**-ಅತ್ಯಾನಂದದಿಂದ, **ಸಾಂದ್ರಾಃ**-ಸಮೃದ್ಧಿಯುಳ್ಳವರಾಗಿ. **ವೈಕುಂಠೇ**-ವೈಕುಂಠಲೋಕದಲ್ಲಿ, **ಶೋಭಂತೇ**-ಶೋಭಿಸುತ್ತಾರೆ (ಅಥವಾ ಮೋದಿಸುತ್ತಾರೆ.)

**ತಾತ್ಪರ್ಯ**—ಹೇ ಪವಮಾನ! ನಿಮ್ಮ ಮೂರನೆಯ ಅವತಾರವಾದ ಶ್ರೀ ಮಧ್ವಾಚಾರ್ಯರು ರುದ್ರಾದಿ ಸಕಲ ದೇವತೆಗಳಿಂದಲೂ ಸಂಸೇವ್ಯರಾಗಿದ್ದಾರೆ. ಅವರನ್ನು ಆರಾಧಿಸುವ ಸಜ್ಜನರು ವೈಕುಂಠಲೋಕವನ್ನು ಸೇರಿ ನಾನಾವಿಧವಾದ ಸುಖಗಳನ್ನು ಭೋಗಿಸುವರು. ಹೇಗೆಂದರೆ ಮುಕ್ತರು ಸುಂದರವಾದ ರೂಪವುಳ್ಳವರಾಗಿ ನಿತ್ಯಯೌವನವುಳ್ಳವರಾಗಿರುತ್ತಾರೆ. ಅವರನ್ನು ಅವರ ಅನುಚರರು ಬೀಸಣಿಗೆಯಿಂದ ಬೀಸುತ್ತಾ ಉಪಚರಿಸುತ್ತಾರಲ್ಲದೆ ಅವರವರ ಪತ್ನಿಯರು ಲಾವಣ್ಯಪೂರ್ಣವಾದ ನಿತ್ಯಯೌವನರೂಪವುಳ್ಳವರಾಗಿ ತಮ್ಮ ಹಾವಭಾವ ಲೀಲಾವಿಲಾಸಗಳಿಂದಲೂ ಕ್ರೀಡಾವಿಹಾರಾಲಿಂಗನಗಳಿಂದಲೂ ಆ ಮುಕ್ತರನ್ನು ಆನಂದಸಮುದ್ರದಲ್ಲಿ ತೇಲಾಡಿಸುವರು.

**ಶ್ಲೋಕ ೧೦**—(ಆನಂದಾನ್) **ಪ್ರಧಾನವಾಕ್ಯ**—ವೈಕುಂದೇಮಂದಿರೇ ಮರುತಃ (ಮುಕ್ತಾನಾಂ) ಆನಂದಾನ್ ದದತಿ ಹಿ-ವೈಕುಂಠಲೋಕದಲ್ಲಿ ಗಾಳಿಗಳೂ ಆನಂದವನ್ನೇ ಕೊಡುತ್ತವೆ.

**ಆನಂದಾನ್ ಮಂದಮಂದಾ ದದತಿ ಹಿ ಮರುತಃ**
**ಕುಂದಮಂದಾರ ನಂದ್ಯಾ-**
**ವರ್ತಾಮೋದಾನ್ ದಧಾನಾ ಮೃದುಪದಮುದಿತೋದ್-ಗೀತಕೈಃ**
**ಸುಂದರೀಣಾಮ್ ।**

---

**ಅನ್ವಯಾರ್ಥ**—ದೇವದೇವ-ದೇವೋತ್ತಮರಾದ ಹೇ ಪ್ರಾಣದೇವ! **ಮೃದುಪದಂ**-ಕೇಳುವುದಕ್ಕೆ ಇಂಪಾದ ಪದಗಳಿಂದ ಕೂಡಿದ ಅಥವಾ ಸುಲಭವಾಗಿ ಅರ್ಥವಾಗುವ ಪದಾವಳಿಯುಳ್ಳ, **ಉದಿತೋದ್ಗೀತಕೈಃ**-ಗೀತೆಗಳನ್ನು ಹಾಡುತ್ತಿರುವ, **ಸುಂದರೀಣಾಂ ವೃಂದೈಃ**-ಸುಂದರ ಸ್ತ್ರೀಸಮೂಹಗಳಿಂದ, ಆವಂದ್ಯ....ಸೇವ್ಯೇ—**ಆವಂದ್ಯ**-ಸೇವಿಸಲ್ಪಡಲು ಯೋಗ್ಯರಾದ, **ಮುಕ್ತ**-ಮುಕ್ತರಾದ, **ಇಂದು**-ಚಂದ್ರ, **ಅಹಿಮಗು**-ಸೂರ್ಯ (ಹಿಮ-ತಣ್ಣನೆಯ, ಅಹಿಮ-ಉಷ್ಣವಾದ, ಗು-ಕಿರಣಗಳುಳ್ಳವ), **ಮದನ**-ಮನ್ಮಥ, **ಅಹೀಂದ್ರ**-ಶೇಷದೇವರು (ಅಹಿ-ಸರ್ಪಗಳ, ಇಂದ್ರ-ರಾಜ), **ದೇವೇಂದ್ರ**-ಇಂದ್ರ ಇವರೇ ಮೊದಲಾದ ದೇವತೆಗಳಿಂದ, **ಸೇವ್ಯೇ**-ಆಶ್ರಯಿಸಲ್ಪಡುವ, **ಅಸ್ಮಿನ್**-ಈ, **ಮೌಕುಂದೇ ಮಂದಿರೇ**-ಮುಕುಂದನ ಮನೆಯಾದ ವೈಕುಂಠದಲ್ಲಿ, **ಮಂದ-ಮಂದಾಃ**-ಮೆಲ್ಲಮೆಲ್ಲಗೆ **ಬೀಸುವ**, ಕುಂದ....ವೋದಾನ್—**ಕುಂದ**-ಮರ ಜಾಜಿ ಹೂವು, **ಮಂದಾರ**-ಕೋಲುಮಲ್ಲಿಗೆ ಹೂವು, **ನಂದ್ಯಾವರ್ತ**-ನಂದೀ ಬಟ್ಟಲು ಇವೇ ಮೊದಲಾದ ಸುಗಂಧ **ಪುಷ್ಪ**ಗಳ, **ಆಮೋದಾನ್**-ಪರಿಮಳವನ್ನು, **ದಧಾನಾಃ**-ಧರಿಸಿರುವ, **ಮರುತಃ**-ತಂಗಾಳಿಗಳು, **ಉದಯನ್ಮೋದಿನಾಂ**-ಸ್ವರೂಪಾನಂದವು ಆವಿರ್ಭವಿಸಿರುವ ಮುಕ್ತರಿಗೆ, **ಆನಂದಾನ್**-ಹರ್ಷೋಲ್ಲಾಸಗಳನ್ನು, **ಅವಿರತಂ**-ನಿತ್ಯವೂ (ಸರ್ವದಾ), **ದದತಿ ಹಿ**-ಕೊಡುತ್ತವೆಂಬುದು **ಶಾಸ್ತ್ರ**ವಿಹಿತವಾಗಿದೆ.

**ತಾತ್ಪರ್ಯ**—ಹೇ ಮುಖ್ಯಪ್ರಾಣ! ಮುಕುಂದನ ಮನೆಯಾದ ವೈಕುಂಠವು ಮುಕ್ತರಾದ ಬ್ರಹ್ಮರುದ್ರೇಂದ್ರಾದಿ ಸಕಲ ದೇವತೆಗಳಿಗೂ ನಿವಾಸ ಸ್ಥಾನವಾಗಿದೆ. ಅಲ್ಲಿ ಅವರೆಲ್ಲ ತಮ್ಮ ತಮ್ಮ ಸ್ವರೂಪಾನಂದವನ್ನು ತಾರತಮ್ಯಾನುಸಾರ ಪಡೆದು ಭೋಗಪಡುತ್ತಿರುತ್ತಾರೆ. ಅಲ್ಲಿಗೆ ಹೋದ ಬಳಿಕ ಪುನಃ ಸಂಸಾರದಲ್ಲಿ ಬೀಳುವಂತಿಲ್ಲ. ಅಲ್ಲದೆ ಅಲ್ಲಿ ದುಃಖದ ಹೆಸರೇ ಇಲ್ಲ.

**ವೃಂದೈರಾವಂದ್ಯಮುಕ್ತೇಂ-ದ್ವಹಿಮಗು-ಮದನಾ-ಹೀಂದ್ರ-**
**ದೇವೇಂದ್ರಸೇವ್ಯೇ**
**ಮೌಕುಂದೇ ಮಂದಿರೇಽಸ್ಮಿ(ನ್)-ನ್ನವಿರತಮುದಯನ್**
**ಮೋದಿನಾಂ ದೇವದೇವ ॥ ೧೦ ॥**

---

ಉತ್ತಮರನ್ನು ಅವರಿಗಿಂತ ಕಿರಿಯರು ಸೇವಿಸುತ್ತಿರುತ್ತಾರೆ. ಉತ್ತಮ ಕಕ್ಷ್ಯದ ಬ್ರಹ್ಮರುದ್ರಾದಿಗಳನ್ನು ಅಪ್ಸರೆಯರು ಕಿನ್ನರಿಯರೇ ಮೊದಲಾದ ದೇವತಾ ಸ್ತ್ರೀಯರು ಮೃದುಮಧುರವಾದ ಪದಾವಳಿಯುಳ್ಳ ಗೀತೆಗಳನ್ನು ಇಂಪಾಗಿ ಹಾಡುತ್ತಾ ಸೇವಿಸುತ್ತಿರುತ್ತಾರೆ. ಜೊತೆಗೆ ಕುಂದ-ಮಂದಾರಾದಿ ಘಮ-ಘಮಿಸುವ ಸುಗಂಧಪುಷ್ಪಗಳ ಸೌರಭದಿಂದ ಕೂಡಿದ ತಂಗಾಳಿಯು ಮೆಲ್ಲ ಮೆಲ್ಲಗೆ ಬೀಸುತ್ತಾ ಅವರ ಆನಂದವನ್ನು ಮತ್ತಷ್ಟು ವೃದ್ಧಿಮಾಡುತ್ತದೆ. ಹೀಗೆ ಮುಕ್ತರು ತಮ್ಮ ತಮ್ಮ ಸ್ವರೂಪಯೋಗ್ಯತಾನುಸಾರ ನಾನಾ ಭೋಗ ಗಳನ್ನು ಭೋಗಿಸುತ್ತಾ ಸಾಯುಜ್ಯ ಸಾಮೀಪ್ಯ ಸಾರೂಪ್ಯ ಸಾಲೋಕ್ಯವೆಂಬ ನಾಲ್ಕುವಿಧ ಸೌಖ್ಯವನ್ನು ಅನಂತಕಾಲದವರೆಗೆ ಅನುಭವಿಸುತ್ತಿರುತ್ತಾರೆ.

## ಹರಿವಾಯುದ್ವೇಷಿಗಳು ಸೇರುವ ನಿತ್ಯನರಕಗಳ ವರ್ಣನೆ
## (ಶ್ಲೋಕ ೧೧-೧೩)

**ಶ್ಲೋಕ ೧೧**—(**ಉತ್ಥಾಪ್ತಾ**) ಹಿಂದೆ ಒಂಬತ್ತನೇ ಶ್ಲೋಕದ ಅವ ತಾರಿಕೆಯಲ್ಲಿ ಸೂಚಿಸಿದಂತೆ ಹರಿವಾಯುಗಳಲ್ಲಿ ದ್ವೇಷಮಾಡುವವರು ಅನುಭವಿಸ ಬೇಕಾಗುವ ಘೋರ ಯಾತನೆಗಳನ್ನು ಈ ಶ್ಲೋಕದಲ್ಲೂ ಹದಿಮೂರನೇ ಶ್ಲೋಕದಲ್ಲೂ ವರ್ಣಿಸುತ್ತಾರೆ.

**ಪ್ರಧಾನವಾಕ್ಯ**—ಗ್ರಾವ್ಣಾಂ ಪಂಕ್ತಿಃ ಭವದ್‌ದ್ವೇಷಿಣಃ ಗರಿವ್ಣಾ ಗ್ಲಪಯತಿ = ಕಲ್ಲುಗಳ ಹೊರೆಯು ನಿಮ್ಮ ದ್ವೇಷಿಗಳನ್ನು ಬಹಳ ಭಾರದಿಂದ ಪೀಡಿಸುತ್ತದೆ.

**ಅನ್ವಯಾರ್ಥ**—ವಿದ್ವದಾದ್ಯ-ಹೇ ವಿದ್ವದ್ವರೇಣ್ಯರಾದ ಮಧ್ವಾ ಚಾರ್ಯರೇ! ತೇ-ನಿಮ್ಮ, ಕಿಂಕರೈಃ-ಸೇವಕರಾದ ಯಮಭಟರಿಂದ, ತತ

**ಉತ್ತಪ್ತಾತ್ಯುತ್ಕಟತ್ವಿಟ್-ಪ್ರಕಟ-ಕಟಕಟ-ಧ್ವಾನಸಂಘಟ್ಟನೋದ್ಯದ್-ವಿದ್ಯುದ್‌ವ್ಯೂಢ-ಸ್ಫುಲಿಂಗ-ಪ್ರಕರ-ವಿಕಿರಣೋತ್-ಕ್ವಾಥಿತೇ ಬಾಧಿತಾಂಗಾನ್ ।**

---

**ಇತಃ**–ಅಲ್ಲಿಂದಿಲ್ಲಿಗೆ, **ಉದ್ಗಾಢಂ**–ಜೋರಾಗಿ (ಬಲವಾಗಿ), **ಪಾತ್ಯಮಾನಾ**–ಹಾಕಲ್ಪಡುತ್ತಿರುವ, **ಉತ್ತಪ್ತಾ....ತ್ವಿಟ್**–ಉತ್-ತಪ್ತ–ಚೆನ್ನಾಗಿ ಕಾಯಸಿದ್ದು, **ಅತ್ಯುತ್ಕಟ**–ಬಹಳ ಹೆಚ್ಚಾದ, **ತ್ವಿಟ್**–ಕಾಂತಿಯುಳ್ಳ, **ಗ್ರಾವ್ಣಾಂ**–ಬೆಣಚು ಕಲ್ಲುಗಳ, **ಪಂಕ್ತಿಃ**–ಪರಂಪರೆಯು (ಹೊರೆಯು), **ಪ್ರಕಟ....ಕ್ವಾಥಿತೇ**—**ಪ್ರಕಟ**–ಸ್ಪಷ್ಟವಾಗಿ, **ಕಟಕಟಧ್ವಾನ**–ಕಟಕಟ ಎಂಬ ಧ್ವನಿಯೊಡನೆ, **ಸಂಘಟ್ಟನ**–ಒಂದಕ್ಕೊಂದು ಬಡಿಯುವುದರಿಂದ, **ಉದ್ಯತ್**–ಹುಟ್ಟುವ, **ವಿದ್ಯುತ್**–ಮಿಂಚಿನ, **ವ್ಯೂಢ**–ಸಮೂಹದ, **ಸ್ಫುಲಿಂಗ**–ಕಿಡಿಗಳ, **ಪ್ರಕರ**–ಗುಂಪಿನಿಂದ, **ವಿಕಿರಣ**–ಹರಡುತ್ತಿರುತ್ತಾ, **ಉತ್‌ಕ್ವಾಥಿತೇ**–ಕೊತಕೊತ ಕುದಿಯುತ್ತಿರುವ, **ಪಂಕಿಲೇ**–ಕೆಸರುಮಯವಾದ, **ತಮಸಿ**–ತಮಸ್ಸೆಂಬ ನಿತ್ಯ ನರಕದಲ್ಲಿ, **ಬಾಧಿತಾಂಗಾನ್**—**ಬಾಧಿತ**–ಹಿಂಸಿಸಲ್ಪಟ್ಟ, **ಅಂಗಾನ್**–ಕರ-ಚರಣಾದಿ ಸಕಲಾಂಗಗಳುಳ್ಳ, **ಭವದ್ವೇಷಿಣಃ**—**ಭವತ್**–ನಿಮ್ಮ, **ದ್ವೇಷಿಣಃ**–ದ್ವೇಷಿಗಳನ್ನು (ಎಂದರೆ ನಿಮ್ಮಲ್ಲಿ ದ್ವೇಷಮಾಡುವವರನ್ನು), **ಗರಿಮ್ಣಾ**–ತನ್ನ ಭಾರದ ಹೊರೆಯಿಂದ, **ಗ್ಲಪಯತಿ**–ಪೀಡಿಸುತ್ತದೆ ಅಥವಾ ಬಳಲಿಸಿ ಗೋಳಾಡಿಸುತ್ತದೆ.

**ತಾತ್ಪರ್ಯ**—ಹೇ ಸರ್ವಜ್ಞಶಿಖಾಮಣಿಗಳಾದ ಶ್ರೀಮದಾಚಾರ್ಯರೇ, ನಿಮ್ಮಲ್ಲಿ ಯಾರು ದ್ವೇಷಮಾಡುತ್ತಾರೋ ಅವರು ನೇರವಾಗಿ ತಮಸ್ಸೆಂಬ ನಿತ್ಯನರಕಕ್ಕೆ ಹೋಗಿ ಬೀಳುವರು. ಅಲ್ಲಿ ಅವರು ಪಡುವ ಬವಣೆ ವರ್ಣಿಸಲೂ ಅಸಾಧ್ಯವಾಗಿದೆ. ಅವುಗಳಲ್ಲಿ ಕಲ್ಲುಗಳೇ ಕಾದು ಕಾದು ಕರಗಿ ನೀರಾಗಿ ತುಂಬಿ ಕೊಂಡಿರುತ್ತವೆ. ಹಾಗೆ ಕರಗಿದ ಕಲ್ಲುರಸವೇ ಕಟಕಟ ಎಂದು ಸ್ಪಷ್ಟವಾಗಿ ಸದ್ದುಮಾಡುತ್ತಾ ಕೊತಕೊತ ಕುದಿಯುತ್ತಿರುತ್ತದೆ. ಕುದಿಯುವಾಗ ಉಂಟಾದ ಅಲೆಗಳು ಒಂದಕ್ಕೊಂದು ತಗಲಿದಾಗ ಮೋಡಗಳಿಂದ ಮಿಂಚು ಹೊರಚಿಮ್ಮುವಂತೆ ಮಿಂಚಿನಂತಹ ಬೆಳಕು ಕಣ್ಣು ಕೋರೈಸುತ್ತಾ ಹರಡಿ ಕೊಳ್ಳುತ್ತದೆ. ಇಂಥಾ ಕುದಿಯುವ ಕಲ್ಲಿನ ರಸದಲ್ಲಿ ಅವರು ಮುಳುಗಿ

**ಉದ್ಗಾಢಂ ಪಾತ್ಯಮಾನಾ ತಮಸಿ ತತ ಇತಃ ಕಿಂಕರೈಃ ಪಂಕಿಲೇ ತೇ**
**ಪಂಕ್ತಿರ್ ಗ್ರಾವ್ಣಾಂ ಗರಿಮ್ಣಾ ಗ್ಲಪಯತಿ ಹಿ ಭವದ್-ದ್ವೇಷಿಣೋ**
**ವಿದ್ವದಾದ್ಯ ॥ ೧೧ ॥**

---

ಮುಳುಗಿ ಮೇಲೇರುತ್ತಿರುತ್ತಾರೆ. ಆದರ ಜೊತೆಗೆ ಅವರಮೇಲೆ ಯಮಭಟರು ಸುರಿಯುವ ಕಲ್ಲುಗಳ ರಾಶಿಗಳು ತಮ್ಮ ಭಾರದ ಹೊರೆಯಿಂದ ಆವರನ್ನು ಜಜ್ಜಿ ಅಪ್ಪಳಿಸುತ್ತಾ ಗೋಳಾಡಿಸುತ್ತಿರುತ್ತವೆ.

## ಉದಾಸೀನನಿಗೆ ಆಗುವ ತ್ರಿಶಂಕುಗತಿ

**ಶ್ಲೋಕ ೧೨**—(ಅಸ್ಮಿನ್) ಶ್ರೀ ಮಧ್ವಾಚಾರ್ಯರಲ್ಲಿ ದ್ವೇಷಮಾಡುವವರಿಗೆ ಆಗುವ ದುರ್ಗತಿಯನ್ನು ವರ್ಣಿಸಿದ ಬಳಿಕ, ಅವರಲ್ಲಿ ದೃಢಭಕ್ತಿಯನ್ನೂ ದ್ವೇಷವನ್ನೂ ಮಾಡದೆ ಉದಾಸೀನತೆಯಿಂದಿರುವ ಜನಗಳಿಗೆ ಆಗುವ ತ್ರಿಶಂಕು ಗತಿಯನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ.

**ಪ್ರಧಾನವಾಕ್ಯ**—ಯಃ ತು ಯುಷ್ಮಾಕಂ ಪಾರ್ಶ್ವಭೂಮಿಂ ಪ್ರಪನ್ನಃ ಉದಾಸ್ತೇ ಸಃ ಅಧಿಭವಂ ಸತತಂ ಆಸ್ತೇ—ಯಾವಾತನು ನಿಮ್ಮ ಸಮೀಪಕ್ಕೆ ಬಂದರೂ ಉದಾಸೀನನಾಗಿರುತ್ತಾನೋ ಅವನು ಸಂಸಾರದಲ್ಲೇ ನಿರಂತರವಾಗಿ ಇರುತ್ತಾನೆ. ಕಥಂಚಿತ್ ಪಂಚಕಷ್ಟೇ ನ ವಸತಿ—ಏನೇ ಆದರೂ ಅಂಧಂತಮಸ್ಸಿನಲ್ಲಿ ಬೀಳುವುದಿಲ್ಲ ಎಂದು ಎರಡು ವಾಕ್ಯಗಳಿವೆ.

**ಅನ್ವಯಾರ್ಥ**—**ಯಃ ತು**-ಯಾವ ಮನುಷ್ಯನು, **ಅಸ್ಮದ್ ಗುರೂಣಾಂ**-ನಮ್ಮ ಗುರುಗಳಾದ, ಹರಿ....ಸನ್ಮಗಲಾನಾಂ—ಹರಿಚರಣ—ಶ್ರೀವಿಷ್ಣುವಿನ ಪಾದಗಳ, **ಚಿರ**—ನಿರಂತರವಾದ, **ಧ್ಯಾನ**—ಧ್ಯಾನದಿಂದ ಪ್ರಾಪ್ತವಾದ, **ಸನ್ಮಂಗಳಾನಾಂ**-ಉತ್ತಮವಾದ ಸೌಭಾಗ್ಯವುಳ್ಳ, **ಯುಷ್ಮಾಕಂ**-ನಿಮ್ಮ, **ಸ್ವರ್ಗಿ ಸೇವ್ಯಾಂ**—**ಸ್ವರ್ಗಿ**-ರುದ್ರಾದಿ ದೇವತೆಗಳಿಂದ, **ಸೇವ್ಯಾಂ**-ಸೇವಿಸಲ್ಪಡುವ, **ಪಾರ್ಶ್ವಭೂಮಿಂ**-ಸಮೀಪ ಪ್ರದೇಶವನ್ನು, **ಅಸ್ಮಿನ್**-ಈ **ಲೋಕದಲ್ಲಿ**, ಧೃತ....ರಣಿಕಃ-**ಧೃತ**—ಧರಿಸಲ್ಪಟ್ಟ, **ರಣರಣಿಕಃ**—ಅಭಿಲಾಷೆಗಳುಳ್ಳವನಾಗಿ, **ಪ್ರಪನ್ನಃ**—ಆಶ್ರಯಿಸಿದವನಾದರೂ (ಹೊಂದಿದರೂ,)

**ಅಸ್ಮಿನ್ನಸ್ಮದ್ಗುರೂಣಾಂ ಹರಿಚರಣಚಿರ-ಧ್ಯಾನಸನ್ಮಂಗಲಾನಾಂ**
**ಯುಷ್ಮಾಕಂ ಪಾರ್ಶ್ವಭೂಮಿಂ ಧೃತರಣರಣಿಕಃ ಸ್ವರ್ಗಿಸೇವ್ಯಾಂ**
**ಪ್ರಪನ್ನಃ ।**
**ಯಸ್ತೂದಾಸ್ತೇ ಸ ಆಸ್ತೇಽಧಿಭವಮಸುಲಭ-ಕ್ಲೇಶನಿರ್ಮೋಕಮಸ್ತ-**
**ಪ್ರಾಯಾನಂದಂ ಕಥಂಚಿ-ನ್ನ ವಸತಿ ಸತತಂ ಪಂಚಕಷ್ಟೇಽತಿಕಷ್ಟೇ॥೧೨॥**

---

**ಉದಾಸ್ತೇ**-(ದೃಢ ವಿಶ್ವಾಸ ಮತ್ತು ಭಕ್ತಿಗಳನ್ನು ಮಾಡದೆ) ಉಪೇಕ್ಷೆ ಮಾಡುತ್ತಾನೋ, **ಸಃ**-ಅವನು, ಅಸುಲಭ....ನಿರ್ಮೋಕಂ—**ಅಸುಲಭ**-ದುರ್ಲಭವಾದ, **ಕ್ಲೇಶ**-(ಜನನ-ಮರಣ, ರೋಗ-ರುಜಿನ, ಸುಖ-ದುಃಖಗಳೇ ಮೊದಲಾದ ಅನೇಕ) ಕಷ್ಟಗಳಿಂದ, **ನಿರ್ಮೋಕಂ**-ಬಿಡುಗಡೆಯಿಲ್ಲದ, ಅಸ್ತ.... ನಂದಂ—**ಅಸ್ತ**-ಮುಳುಗಿದುದಕ್ಕೆ, **ಪ್ರಾಯ**-ಸಮಾನವಾದ, **ಆನಂದಂ**-ಸೌಖ್ಯವುಳ್ಳಂಥಾ, **ಅಧಿಭವಂ**-ಸಂಸಾರದಲ್ಲೇ, **ಆಸ್ತೇ**-ಬಿದ್ದಿರುತ್ತಾನೆ, (ಆದರೆ) **ಕಥಂಚಿತ್**-ಯಾವ ವಿಧದಿಂದಲೂ, **ಅತಿಕಷ್ಟೇ**-ಅತ್ಯಂತ ಘೋರವಾದ, **ಪಂಚಕಷ್ಟೇ**-ಅಂಧಂತಮಸ್ಸೆಂಬ ನಿತ್ಯನರಕದಲ್ಲಿ, **ನ ವಸತಿ**-ವಾಸ ಮಾಡುವುದಿಲ್ಲ.

**ತಾತ್ಪರ್ಯ**— ನಮ್ಮೆಲ್ಲರಿಗೂ ಆದಿಗುರುಗಳೆನಿಸಿದ ಹೇ ಮಧ್ವಾಚಾರ್ಯರೇ, ನೀವು ನಿರಂತರವಾಗಿ ಎಡೆಬಿಡದೆ ಸದಾ ಶ್ರೀಹರಿಯ ಪಾದಾರವಿಂದಗಳನ್ನೇ ಧ್ಯಾನಮಾಡುತ್ತಿದ್ದುತ್ತೀರಿ. ಅದರಿಂದ ನಿಮಗೆ ಸದಾ ಮಂಗಳವೇ ಮಂಗಳ, ಅನಿಷ್ಟರ ನೆರಳೂ ಸಹ ಬೀಳುವಂತಿಲ್ಲ. ಇದನ್ನು ಕಂಡೇ ರುದ್ರಾದಿ ಸಕಲ ದೇವತೆಗಳೂ ಕೂಡ ತಮ್ಮ ತಮ್ಮ ಶ್ರೇಯಸ್ಸಿಗಾಗಿ ನಿಮ್ಮನ್ನು ಆಶ್ರಯಿಸಿ ಕೃತಾರ್ಥರಾಗಿದ್ದಾರೆ. ಹೀಗಿರಲು ರಾಜಸ ಸ್ವಭಾವದ ಕೆಲವು ಜನರು ಏನೇನೋ ನಾನಾ ಅಭಿಲಾಷೆಗಳನ್ನಿಟ್ಟುಕೊಂಡು ನಿಮ್ಮನ್ನು ಆಶ್ರಯಿಸುತ್ತಾರಾದರೂ ಅವರಿಗೆ ನಿಮ್ಮಲ್ಲಿ ಸ್ಥಿರವಾದ ಶ್ರದ್ಧಾಭಕ್ತಿಗಳು ಮೂಡುವುದಿಲ್ಲ. ನಿಮ್ಮ ಶಾಸ್ತ್ರಗಳನ್ನು ಓದಿ ಮೆಚ್ಚುತ್ತಾರಾದರೂ ಅವುಗಳಲ್ಲಿ ಪೂರ್ಣ ವಿಶ್ವಾಸವೇ ಇರುವುದಿಲ್ಲ. ತಾತ್ಸಾರಬುದ್ಧಿಯಿಂದ ಅವನ್ನು ಯಥಾಶಕ್ತಿ ಆಚರಣೆಗೂ ತರುವುದಿಲ್ಲ. ಇದರಿಂದ ಒಂದು ಕಡೆ ಅವರು ಸಂಸಾರದ ಕಷ್ಟಸುಖಗಳ ಬಂಧನದಿಂದ ಸಂಪೂರ್ಣವಾಗಿ ಪಾರಾಗುವುದೂ ಇಲ್ಲ. ಇನ್ನೊಂದು

**ಕ್ಷುತ್-ಕ್ಷಾಮಾನ್ ರೂಕ್ಷರಕ್ಷೋ-ರದ-ಖರ-ನಖರ-**
**ಕ್ಷುಣ್ಣವಿಕ್ಷೋಭಿತಾಕ್ಷಾ(ನ್)-**
**ನಾ(ಅ)ಮಗ್ನಾನಂಧಕೂಪೇ ಕ್ಷುರಮುಖ-ಮುಖರೈಃ**
**ಪಕ್ಷಿಭಿರ್ವಿಕ್ಷತಾಂಗಾನ್ ।**

---

ಕಡೆ ದುಃಖದ ಸ್ಪರ್ಶವೇ ಇಲ್ಲದ ಶಾಶ್ವತ ಸುಖದಿಂದಲೂ ವಂಚಿತರಾಗುತ್ತಾರೆ. ಹೀಗೆ ಅವರದು ಇತೋ ಭ್ರಷ್ಟ, ತತೋ ಭ್ರಷ್ಟ ಎಂಬಂತೆ ತ್ರಿಶಂಕುವಿನ ಗತಿಯೇ ಸರಿ. ಆದರೆ ಒಂದೇನು ಕ್ಷೇಮವೆಂದರೆ ತಾಮಸ ಜನಗಳಂತೆ ಅವರು ಶ್ರೀಹರಿ-ವಾಯುಗಳಲ್ಲಿ ಬದ್ಧದ್ವೇಷ ಮಾಡದೇ ಇರುವ ಪ್ರಯುಕ್ತ ಅವರು ಎಂದೆಂದಿಗೂ ಅಂಧಂತಮಸ್ಸಿನಲ್ಲಿ ಬಿದ್ದು ಗೋಳಾಡುವ ಪ್ರಸಂಗವೇ ಇಲ್ಲ.

## ನಿತ್ಯನರಕಗಳ ಕಡುದುಃಖ

**ಶ್ಲೋಕ ೧೩**—(ಕ್ಷುತ್‌ಕ್ಷಾಮಾನ್) ಹನ್ನೆರಡನೇ ಶ್ಲೋಕದ ಕಡೆಯಲ್ಲಿ “ಅವರು ಅತಿ ಕಷ್ಟವಾದ ಪಂಚಕಷ್ಟವೆಂಬ ಅಂಧಂತಮಸ್ಸಿನಲ್ಲಿ ಬೀಳುವುದಿಲ್ಲ” ಎಂದು ಹೇಳಿದರು. ಈ ಶ್ಲೋಕದಲ್ಲಿ ತಾಮಸಜನಗಳು ಅನುಭವಿಸುವ ಆ ಐದು ವಿಧ ಕಷ್ಟಗಳನ್ನೇ ಮನಮುಟ್ಟುವಂತೆ ವರ್ಣಿಸುತ್ತಾರೆ.

**ಪ್ರಧಾನವಾಕ್ಯ**—ತ್ವದ್‌ದ್ವಿಷಃ ಜಲೂಕಾಃ ಉಪಜಿಹತೇ=ನಿಮ್ಮ ಶತ್ರುಗಳನ್ನು ಜಿಗಣೆಗಳು ಮುತ್ತಿಕೊಳ್ಳುತ್ತವೆ.

**ಅನ್ವಯಾರ್ಥ**—(ಎಲೈ ಮಧ್ವಾಚಾರ್ಯರೇ!) ೧) ಕ್ಷುತ್-ಕ್ಷಾಮಾನ್—**ಕ್ಷುತ್**-ಹಸಿವಿನಿಂದ, **ಕ್ಷಾಮಾನ್**-ಬಳಲಿದ (ಕಂಗೆಟ್ಟ), ೨) ರೂಕ್ಷ....ಕ್ಷೋಭಿತಾಕ್ಷಾನ್—**ರೂಕ್ಷ**-ಕ್ರೂರರೂ ನಿರ್ದಯರೂ ಆದ, **ರಕ್ಷಃ**-ರಾಕ್ಷಸರ, **ರದ**-ಹಲ್ಲುಗಳಿಂದಲೂ, **ಖರ**-ತೀಕ್ಷ್ಣವಾದ, **ನಖರ**-ಉಗುರುಗಳಿಂದಲೂ, **ಕ್ಷುಣ್ಣ**-ಪರಚಲ್ಪಟ್ಟು, **ವಿಕ್ಷೋಭಿತ**-ಕಂಗೆಟ್ಟ (ಬಹಳ ಪೀಡಿಸಲ್ಪಟ್ಟ), **ಅಕ್ಷಾನ್**-ಕಣ್ಣುಗಳುಳ್ಳ, ೩) ಪೂಯಾ....ಕಲಿಲೇ—**ಪೂಯ**-ಕೀವು, **ಅಸೃಕ್**-ರಕ್ತ, **ಮೂತ್ರ**-ಮೂತ್ರ, **ವಿಷ್ಠಾ**-ಮಲ (ಪಾಯಖಾನೆ),

**ಪೂಯಾಸೃಙ್-ಮೂತ್ರವಿಷ್ಠಾ-ಕೃ(ಕ್ರಿ)ಮಿಕುಲಕಲಿಲೇ**
**ತತ್ಕ್ಷಣಾಕ್ಷಿಪ್ತಶಕ್ತ್ಯ-**
(ಪಾಠಾಂ. ತತಕ್ಷಣಕ್ಷಿಪ್ತ, ತತ್ಕ್ಷಣೋತ್ಕ್ಷಿಪ್ತ)
**ದ್ಯಸ್ತ್ರವ್ರಾತಾರ್ದಿತಾಂಸ್ತ್ವದ್-ದ್ವಿಷ ಉಪಜಿಹತೇ**
**ವಜ್ರಕಲ್ಪಾ ಜಲೂಕಾಃ ॥ ೧೩ ॥**

---

**ಕೃ(ಕ್ರಿ)ಮಿ-ಕುಲ**–ಕ್ರಿಮಿಗಳ ಸಮೂಹ–ಇವುಗಳಿಂದ, **ಕಲಿಲೇ**–ಅಸಹ್ಯವಾದ ಅಥವಾ ದಟ್ಟವಾದ ಅಥವಾ ಮಿಶ್ರವಾದ, **ಅಂಧತಮಸೇ**–ಕಗ್ಗತ್ತಲಿಂದ ಕೂಡಿದ ಅಂಧಂತಮಸ್ಸಿನಲ್ಲಿ, **ಆಮಗ್ನಾನ್**–ಸಂಪೂರ್ಣವಾಗಿ ಮುಳುಗಿ ದಂಥಾ, ೪) ಕ್ಷುರ....ಮುಖರೈಃ—**ಕ್ಷುರ**–ಕ್ಷೌರದ ಕತ್ತಿಯಂತೆ (ಹರಿತವಾದ), **ಮುಖ**–ಬಾಯಿ (ಕೊಕ್ಕು)ಗಳುಳ್ಳವುಗಳೂ, **ಮುಖರೈಃ**–ಕರ್ಣಕಠೋರವಾಗಿ ಶಬ್ದ ಮಾಡುತ್ತಲೂ ಇರುವಂಥಾ, **ಪಕ್ಷಿಭಿಃ**–ಹಕ್ಕಿಗಳಿಂದ, ವಿಕ್ಷತಾಂಗಾನ್— **ವಿಕ್ಷತ**–ಕುಕ್ಕಿಕುಕ್ಕಿ ಎಳೆದಾಡಲ್ಪಡುತ್ತಿರುವ, **ಅಂಗಾನ್**–ಕರಚರಣಾದಿ ಅವ ಯವಗಳುಳ್ಳ, ೫) ತತ್ಕ್ಷ....ವ್ರಾತಾರ್ದಿತಾನ್—**ತತ್ಕ್ಷಣ**–ಅದೇ ವೇಳೆ ಯಲ್ಲೇ, **ಕ್ಷಿಪ್ತ** (ಪಾಠಾಂ. ಆಕ್ಷಿಪ್ತ ಅಥವಾ ಉತ್ಕ್ಷಿಪ್ತ)–ಎಸೆಯಲ್ಪಟ್ಟ (ಅಥವಾ ಪ್ರಯೋಗಿಸಲ್ಪಟ್ಟ), **ಶಕ್ತಿ**–ಆದಿಶಕ್ತಿಯೆಂಬುದೇ ಮೊದಲಾದ, **ಅಸ್ತ್ರ**–ಆಯುಧಗಳ, **ವ್ರಾತ**–ಸಮೂಹಗಳಿಂದ, **ಅರ್ದಿತಾನ್**–ಪೀಡಿಸಲ್ಪಡು ತ್ತಿರುವ, **ತ್ವದ್-ದ್ವಿಷಃ**–ನಿಮ್ಮ ದ್ವೇಷಿಗಳಾದ ತಾಮಸಜನರನ್ನು, **ವಜ್ರ-ಕಲ್ಪಾಃ**–ವಜ್ರದಂತೆ ಕಠೋರವಾಗಿರುವ, **ಜಲೂಕಾಃ**–ಜಿಗಣೆಗಳು, **ಉಪ-ಜಿಹತೇ**–ಸುತ್ತಲೂ ಮುತ್ತಿಕೊಳ್ಳುತ್ತವೆ.

**ತಾತ್ಪರ್ಯ**—ಹಿಂದಿನ ಶ್ಲೋಕದ ಕಡೆಯಲ್ಲಿ "ಪಂಚಕಷ್ಟೇಽತಿಕಷ್ಟೇ" ಎಂದು ಪ್ರಸಕ್ತವಾಗಿದ್ದ ಪಂಚಕಷ್ಟಗಳನ್ನೇ ಈ ಶ್ಲೋಕದಲ್ಲಿ ವರ್ಣಿಸಿದ್ದಾರೆ.

**ಪಂಚಕಷ್ಟ** ಎಂಬುದು ಒಂದು ವ್ಯಾವಹಾರಿಕ ಶಬ್ದ. ರೌರವ, ಮಹಾ ರೌರವ, ವಹ್ನಿ, ವೈತರಣಿ ಮತ್ತು ಕುಂಭೀಪಾಕ ಎಂಬ ಐದು ಘೋರನರಕ ಗಳಲ್ಲಿ ಸುಖದ ಲವಲೇಶವೂ ಇಲ್ಲದೆ ಕೇವಲ ಕಷ್ಟಗಳನ್ನೇ ಅನುಭವಿಸ ಬೇಕಾಗುವುದರಿಂದ ಅವಕ್ಕೆ 'ಪಂಚಕಷ್ಟ' ಎಂಬ ಹೆಸರು ಅನ್ವರ್ಥವಾಗಿ

ಬಂದಿದೆ. ಆದರೆ ಈ ಐದೂ ಅನಿತ್ಯನರಕಗಳೇ ಆಗಿವೆ—ಎಂದರೆ ಇವುಗಳಲ್ಲಿ ಬಿದ್ದರೂ ಸಹ ಕೆಲವುಕಾಲಾನಂತರ ಪುನಃ ಹೊರಕ್ಕೆ ಬರುವ ಸಂಭವವಿದೆ. ಆದರೆ ಈ ಐದು ನರಕಗಳಿಗಿಂತಲೂ ಹೆಚ್ಚು ಘೋರವಾದ ಬೇರೆ ಎರಡು ನಿತ್ಯ-ನರಕಗಳಿವೆ. ಅದಕ್ಕೆ ತಾಮಿಸ್ರ, ಅಂಧತಾಮಿಸ್ರ ಎಂದು ಹೆಸರು. ಈ ಎರಡ ರಲ್ಲೂ ತಾಮಿಸ್ರಕ್ಕಿಂತಲೂ ಅಂಧತಾಮಿಸ್ರವು ಅತ್ಯಂತ ಘೋರವಾದುದು. ಇವುಗಳಲ್ಲಿ ಒಂದಾವರ್ತಿ ಬಿದ್ದಮೇಲೆ ಹೊರಕ್ಕೆ ಬರುವ ಸಂಭವವೇ ಇಲ್ಲ, ಆ ಗೋಳಾಟ ತಪ್ಪುವ ಹಾಗೂ ಸಹ ಇಲ್ಲ. ಇದನ್ನು ಗಮನಿಸಿಯೇ ಪಂಡಿತಾ ಚಾರ್ಯರು 'ಪಂಚಕಷ್ಟೇ' ಎಂಬುದಕ್ಕೆ 'ಅತಿಕಷ್ಟೇ' ಎಂಬ ವಿಶೇಷಣ ಕೊಟ್ಟಿ ದ್ದಾರೆ. ಆದಕಾರಣ ಈ ಶ್ಲೋಕವು ತಮಿಸ್ರ-ಅಂಧತಾಮಿಸ್ರ ಎಂಬ ನಿತ್ಯ ನರಕಗಳ ಸ್ಥೂಲವರ್ಣನೆಯೆಂದೇ ತಿಳಿಯಬೇಕು. ಹೀಗೇಕೆ ಹೇಳಿದೆವೆಂದರೆ— ಬ್ರಹ್ಮಸೂತ್ರಭಾಷ್ಯದಲ್ಲಿ (೩ ಅಧ್ಯಾ. ೧ ಪಾ. ೧೨ನೇ ಅಧಿಕರಣ)

**" ಶ್ರವಣಾದೇವ ಮೂರ್ಛಾದಿ—ರಥರಸ್ಯ ಯಥೋ ಭವೇತ್ "**

ಎಂಬ ಕೂರ್ಮಪುರಾಣ ವಾಕ್ಯವನ್ನು ಉದಹರಿಸಿದ್ದಾರೆ. ಆ ವಾಕ್ಯಕ್ಕೆ ಅರ್ಥ ಹೇಳುವಾಗ 'ತತ್ತ್ವಪ್ರದೀಪ'ದಲ್ಲಿ " ಆ ನಿತ್ಯನರಕದ ವರ್ಣನೆಯನ್ನೇ ಹೆಚ್ಚು ಹೆಚ್ಚು ಕೇಳುತ್ತಾಹೋದರೆ ಮೂರ್ಛೆಯೇ ಬಂದುಬಿಡುತ್ತದೆ ಅಥವಾ ಹುಚ್ಚೇ ಹಿಡಿದೀತು, ಇನ್ನೂ ಹೆಚ್ಚಾದರೆ ಮರಣವೇ ಸಂಭವಿಸಬಹುದು " ಎಂದು ಸಾಕ್ಷಾತ್ ತ್ರಿವಿಕ್ರಮ ಪಂಡಿತಾಚಾರ್ಯರೇ ವಿವರಿಸಿದ್ದಾರೆ. ಆದಕಾರಣ ಇಲ್ಲಿರುವುದು ಸ್ಥೂಲವರ್ಣನೆ ಮಾತ್ರ ಎಂದು ತಿಳಿಯಬೇಕು.

**ಪಂಚಕಷ್ಟಗಳು**—ವಿಷ್ಣುದ್ವೇಷಿಗಳು ಕೊನೆಯಿಲ್ಲದಂತೆ ನಿತ್ಯವಾಗಿ ಅನುಭವಿಸುವ ಕಷ್ಟಗಳು ಈ ರೀತಿ ಐದು ಬಗೆಯವಾಗಿರುತ್ತವೆ. ೧) **ಕಾರ್ಗತ್ತ ಲಿನ ಕೊಳಚೆಯ ಗುಂಡಿ**—ಆ ನರಕಗಳು (೧೧ನೇ ಶ್ಲೋಕದಲ್ಲಿ ವರ್ಣಿಸಿದಂತೆ) ಕಾರ್ಗತ್ತಲಿನಿಂದ ತುಂಬಿದ್ದು ದ್ರವೀಭೂತವಾದ ಕಲ್ಲಿನ ರಸ ಕೊತಕೊತ ಕುದಿ ಯುತ್ತ ಹರಿದಾಡುತ್ತಿರುತ್ತದೆ. ಅದರಲ್ಲಿ ಸಿಕ್ಕಿಕೊಂಡ ಜೀವಿಗಳು ವಿಸರ್ಜಿಸುವ ಮಲ-ಮೂತ್ರಗಳೂ, ಕೀವು-ರಕ್ತಗಳೂ ಸೇರಿ ದುರ್ಗಂಧ ಹೊಡೆಯುತ್ತಿರು ತ್ತದೆ. ಸಾಲದ್ದಕ್ಕೆ ಸಾವಿರಾರು ಕ್ರಿಮಿಗಳು ಬಂದು ಮೈಮೇಲೆಲ್ಲಾ ಹರಿದಾಡಿ ಕಿತ್ತು ತಿನ್ನುತ್ತಿರುತ್ತವೆ. ೨) **ಕ್ಷುದ್ಬಾಧೆ**—ಹಸಿವಿನಿಂದಲೂ, **ಬಾಯಾರಿಕೆ**

**ಮಾತರ್ಮೇ ಮಾತರಿಶ್ವನ್ ! ಪಿತರತುಲಗುರೋ**
**ಭ್ರಾತರಿಷ್ಟಾಪ್ತ ಬಂಧೋ**
**ಸ್ವಾಮಿನ್ ಸರ್ವಾಂತರಾತ್ಮ-ನ್ನಜರ ಜರಯಿತರ್-ಜನ್ಮ-**
**ಮೃತ್ಯಾಮಯಾನಾಮ್ ।**

---

ಯಿಂದಲೂ ಬಳಲಿ ಬೆಂಡಾಗಿರುತ್ತಾರೆ. ೩) **ರಾಕ್ಷಸರ ಬಾಧೆ**—ಕ್ರೂರದಾದ ಉಗ್ರರಾಕ್ಷಸರು ತಮ್ಮ ತೀಕ್ಷ್ಣವಾದ ಹಲ್ಲುಗಳಿಂದಲೂ ಉಗುರುಗಳಿಂದಲೂ ಕಣ್ಣುಗಳನ್ನು ಕುಕ್ಕಿಕುಕ್ಕಿ ಗೋಳಾಡಿಸುತ್ತಿರುತ್ತಾರೆ. ೪) **ಪಕ್ಷಿಗಳಿಂದ ಅಂಗಕ್ಷತಿ**—ಕ್ಷೌರದ ಕತ್ತಿಗಳಂತೆ ಹರಿತವಾದ ಮೊನೆಯುಳ್ಳ ಕೊಕ್ಕುಗಳಿಂದ ರಣಹದ್ದುಗಳೇ ಮೊದಲಾದ ಘಾತಕ ಪಕ್ಷಿಗಳು ಕವಕವಗುಟ್ಟುತ್ತಾ ಹಾರಿ ಹಾರಿ ಬಂದು ಅವರ ಅಂಗಾಂಗಗಳನ್ನೆಲ್ಲಾ ಕುಕ್ಕಿ, ಪರಚಿ ಎಳೆದಾಡುತ್ತಿರುತ್ತವೆ. ೫) **ಜಲೂಕ(ಜಿಗಣೆ)ಗಳಿಂದ ದಂಶನ**—ವಜ್ರದಂತೆ ಅತಿ ಕಠೋರವಾದ ಜಿಗಣೆಗಳು ಸುತ್ತಲೂ ಮುತ್ತಿಕೊಂಡು ರಕ್ತವನ್ನು ಹೀರುತ್ತಿರುತ್ತವೆ. ಹೀಗೆ ಕಲ್ಪನೆಗೇ ಎಟಕದ ನಾನಾ ಕಷ್ಟಗಳನ್ನು ಅನುಭವಿಸುತ್ತಿರಬೇಕೇ ಹೊರತು ಅವರಿಗೆ ಎಂದೆಂದಿಗೂ ಸುಖ ಲೇಶವೂ ಕೂಡ ದೊರಕುವ ಸಂಭವವೂ ಇಲ್ಲ, ಅಥವಾ ಎಂದಾದರೊಮ್ಮೆ ಈ ಸಂಕಟದಿಂದ ಪಾರಾಗಬಹುದೆಂಬ ಆಶೆಯೂ ಸರ್ವಥಾ ಇಲ್ಲ.

## ಹರಿವಾಯುಗಳಲ್ಲಿ ಭಕ್ತಿಗಾಗಿ ಬೇಡಿಕೆ (ಶ್ಲೋಕ ೧೪ ರಿಂದ ೧೬)

**ಶ್ಲೋಕ ೧೪**—(ಮಾತರ್ಮೇ) ಹರಿವಾಯುಗಳಲ್ಲಿ ದ್ವೇಷಮಾಡುವುದು ಎಂಥಾ ಅನರ್ಥಕ್ಕೆ ಕಾರಣವೆಂಬುದನ್ನು ವರ್ಣಿಸಿದ ಬಳಿಕ, ಹಿಂದೆ ೭ನೇ ಶ್ಲೋಕದಲ್ಲಿ 'ಮೂರ್ಧನಿ' ಎಂದು ಹರಿವಾಯುಗಳಲ್ಲಿ ಬೇಡಿದ್ದ ಭಕ್ತಿಯನ್ನೇ ಸರ್ವಾಂಗಪೂರ್ಣವಾಗಿರಲೆಂದು ಪ್ರಾರ್ಥಿಸುತ್ತಾ "ತ್ವಮೇವ ಸರ್ವಂ ಮಮ ದೇವ ದೇವ" ಎಂದರೆ "ಹೇ ಸ್ವಾಮಿ, ತಂದೆ ತಾಯಿ, ಬಂಧು ಬಳಗ ಎಲ್ಲವೂ ನೀನೇ ಆಗಿದ್ದೀಯೆ" ಎಂಬ ಉಕ್ತಿಯನ್ನು ಅನುಕರಿಸಿ ಸರ್ವಭಾವದಿಂದ ಆ ಪ್ರಾಣದೇವರನ್ನೇ ಪ್ರಾರ್ಥಿಸುತ್ತಾರೆ.

**ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವ(ನ್)-ನ್ನೂ**
**(ಊ)ರ್ಜಿತಾಂ ನಿರ್ನಿಮಿತ್ತಾಂ**
**ನಿರ್ವ್ಯಾಜಾಂ ನಿಶ್ಚಲಾಂ ಸದ್-ಗುಣಗಣಬೃಹತೀಂ**
**ಶಾಶ್ವತೀಮಾಶು ದೇವ ! ॥ ೧೪ ॥**

---

**ಪ್ರಧಾನವಾಕ್ಯ—ಮಾತರಿಶ್ವನ್ ! ಗೋವಿಂದೇ ಭವತಿ ಚ ಭಕ್ತಿಂ ದೇಹಿ**=ಹೇ ವಾಯುದೇವರೇ ! ಶ್ರೀಹರಿಯಲ್ಲೂ ನಿಮ್ಮಲೂ ಭಕ್ತಿಯನ್ನು ಕೊಡಿ.

**ಅನ್ವಯಾರ್ಥ—ಮಾತಃ**–ಹೇ ತಾಯಿಯೇ, **ಪಿತಃ**–ಎಲೈ ತಂದೆಯೇ, **ಅತುಲ**–ಅಸದೃಶರಾದವರೇ ; **ಗುರೋ**–ಗುರುಗಳೇ (ಅಥವಾ ಅತುಲಗುರೋ-ಎದುರಿಲ್ಲದ ಗುರುಗಳೇ) ; **ಭ್ರಾತಃ**–ಹಿರಿಯ ಅಣ್ಣನೇ, **ಇಷ್ಟ**–ಪ್ರೀತ್ಯಾ-ಸ್ಪದರೇ, **ಆಪ್ತ**–ನನಗೆ ಹಿತವನ್ನು ಬಯಸುವವರೇ, **ಬಂಧೋ**–ಬಂಧುವೇ (ನೆಂಟನೇ) (ಅಥವಾ ಆಪ್ತ ಬಂಧೋ–ಆಪದ್ಬಂಧುವೇ ಅಥವಾ ಪ್ರೀತಿಪಾತ್ರ ನಾದ ನೆಂಟನೇ) ; **ಸ್ವಾಮಿನ್**-ಹೇ ಒಡೆಯನೇ (ಯಜಮಾನನೇ) ; **ಸರ್ವಾಂತರಾತ್ಮನ್**-ಎಲ್ಲರ ಹೃದಯದಲ್ಲೂ ನಿಂತು ಶ್ವಾಸೋಚ್ಛ್ವಾಸ ನಡೆಸುವವರೇ, **ಅಜರ**–ಮುಪ್ಪು, ಜನನ ಮರಣಾದಿ ದೋಷಗಳಿಲ್ಲದ ಚಿರಂ ಜೀವಿಯೇ, ಜನ್ಮ....ಯಾನಾಂ—**ಜನ್ಮ**-ಹುಟ್ಟುವುದು, **ಮೃತಿ**-ಸಾಯುವುದು, **ಆಮಯಾನಾಂ**–ರೋಗ-ರುಜಿನ ಮೊದಲಾದವುಗಳನ್ನು, **ಜರಯಿತಃ**–ನಾಶ ಮಾಡುವವರೇ, **ಭಗವನ್**–ಐಶ್ವರ್ಯಾದಿ ಗುಣಭರಿತರೇ, **ದೇವ**–ದೇವೋತ್ತಮ ರಾದ, **ಮಾತರಿಶ್ವನ್**–ಹೇ ಮುಖ್ಯಪ್ರಾಣದೇವರೇ ! **ಗೋವಿಂದೇ**–ವೇದ ಪ್ರತಿಪಾದ್ಯನಾದ ಶ್ರೀಹರಿಯಲ್ಲೂ, **ಭವತಿ ಚ**–ತಮ್ಮಲ್ಲೂ ಸಹ, **ಊರ್ಜಿತಾಂ**–ಅತ್ಯಧಿಕವಾದ, **ನಿರ್ನಿಮಿತ್ತಾಂ**–ನಿಷ್ಕಾರಣವಾದ ಅಥವಾ ನಿರುಪಾಧಿಕವಾದ, **ನಿರ್ವ್ಯಾಜಾಂ**–ನಿರಾಡಂಬರವಾದ ಅಥವಾ ಅಡಾಂಭಿಕ ವಾದ, **ನಿಶ್ಚಲಾಂ**–ಸುಸ್ಥಿರವಾದ, **ಸದ್ಗುಣಗಣಬೃಹತೀಂ** ಮಾಹಾತ್ಮ್ಯ ಜ್ಞಾನಪೂರ್ವಕವಾದ (ಅಥವಾ ವೈರಾಗ್ಯ ಶಮದಮಾದಿ ಗುಣಗಳಿಂದ ಕೂಡಿದ), **ಶಾಶ್ವತೀಂ**–ಶಾಶ್ವತವಾದ, **ಭಕ್ತಿಂ**–ಭಕ್ತಿಯನ್ನು, **ಮೇ**–ನನಗೆ, **ಆಶು**–ಶೀಘ್ರವಾಗಿ, **ದೇಹಿ**–ಕೊಡಿರಿ.

**ವಿಷ್ಣೋರತ್ಯುತ್ತಮತ್ವಾ-ದಖಿಲಗುಣಗಣೈ-ಸ್ತತ್ರ ಭಕ್ತಿಂ ಗರಿಷ್ಠಾಂ**
**ಸಂಶ್ಲಿಷ್ಟೇ ಶ್ರೀಧರಾಭ್ಯಾ-ಮಮುಮಥ ಪರಿವಾ-ರಾತ್ಮನಾ ಸೇವಕೇಷು।**

---

**ತಾತ್ಪರ್ಯ**—ಹೇ ಮುಖ್ಯಪ್ರಾಣದೇವ! ನೀವೇ ನನಗೆ ತಾಯಿ ತಂದೆ ಬಂಧು-ಬಳಗ, ಆಪ್ತರು ಹಿತೈಷಿಗಳೂ ಗುರುಗಳೂ ಒಡೆಯರೂ (ಪ್ರಭುವೂ) ಸಕಲವೂ ಆಗಿದ್ದೀರಿ. ಅಥವಾ ತಂದೆ-ತಾಯಿ ಬಂಧು-ಬಳಗ ಎಲ್ಲರೂ ನನ್ನನ್ನು ಪ್ರೀತಿಸುವಂತೆ ಮಾಡಲು ನೀವೇ ಕಾರಣರಾಗಿದ್ದೀರಿ. (ಈ ಮಾತಿಗೆ 'ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ' ಮೊದಲಾದ ಬೃಹದಾರಣ್ಯಕ ಉಪನಿಷದ್ = ೪ ಅ. ೪ ಬ್ರಾ. ೫೩೦—ವಾಕ್ಯಗಳೇ ಪ್ರಮಾಣ.) ಅಥವಾ ತಂದೆ-ತಾಯಿ ಮೊದಲಾದವರೆಲ್ಲ ಬೇರೆ ಬೇರೆ ಜನ್ಮಗಳಲ್ಲಿ ಬೇರೆ ಬೇರೆ ಆಗುವರು. ಆದರೆ ನೀವೂ ಶ್ರೀಹರಿಯೂ ಸದಾ ಈ ಎಲ್ಲವೂ ಆಗಿದ್ದೀರಿ. ನಿಮ್ಮ ಸ್ಮರಣೆಯಿಂದ ಜನನ-ಮರಣ ರೋಗ-ರುಜಿನಾದಿ ಸಕಲಾನಿಷ್ಟಗಳೂ ನಿವಾರಣೆಯಾಗುತ್ತವೆ. ನೀವು ರುದ್ರಾದಿಗಳಿಂದ ಆರಂಭಿಸಿ ತೃಣಜೀವರ ಪರ್ಯಂತ ಎಲ್ಲ ಪ್ರಾಣಿಗಳ ಹೃದಯದಲ್ಲೂ ನಿಂತು ಪ್ರಾಣಾಧಾರರಾಗಿದ್ದೀರಿ. ಜನ್ಮ ಜನ್ಮಾಂತರಗಳಲ್ಲೂ ನೀವೇ ನಮಗೆ ಆದಿಗುರುಗಳಾಗಿದ್ದೀರಿ. ಆದಕಾರಣ ಹೇ ಸ್ವಾಮಿ, ತಾವು ನನಗೆ ಶ್ರೀವಿಷ್ಣುವಿನಲ್ಲಿ ಸರ್ವೋತ್ತಮ ಜ್ಞಾನಪೂರ್ವಕವಾದ ಅತ್ಯಧಿಕವಾದ ನಿಶ್ಚಲವಾದ ದೃಢಭಕ್ತಿಯನ್ನೂ ಅದೇ ರೀತಿ ನಿಮ್ಮಲ್ಲಿ ಸರ್ವ ಜೀವೋತ್ತಮ ಜ್ಞಾನಪೂರ್ವಕವಾದ ನಿರಾಡಂಬರದ, ಡಾಂಭಿಕವಲ್ಲದ ಸುಸ್ಥಿರವಾದ ದೃಢಭಕ್ತಿಯನ್ನೂ ಅನುಗ್ರಹಮಾಡಿರಿ.

**ಶ್ಲೋಕ ೧೫—(ವಿಷ್ಣೋರ) ತಾರತಮ್ಯ ಪ್ರಕಾರವೇ ಭಕ್ತಿ ಮಾಡಬೇಕು.**

**ಅವತಾರಿಕೆ**—ಹಿಂದಿನ ಶ್ಲೋಕದಲ್ಲಿ 'ಗೋವಿಂದೇ ದೇಹಿ ಭಕ್ತಿಂ ಭವತಿ ಚ' ಎಂದು ಹೇಳಿದ್ದನ್ನೇ ಶಾಸ್ತ್ರಸಮ್ಮತ ರೀತ್ಯಾ ಸ್ಪಷ್ಟಪಡಿಸುತ್ತಾ, ಸ್ವತಂತ್ರನೂ ಸರ್ವೋತ್ತಮನೂ ಆದಕಾರಣ ಶ್ರೀವಿಷ್ಣುವೊಬ್ಬನಲ್ಲಿ ಮಾತ್ರ ನಿರವಧಿಕನಾಗಿ—ಅತ್ಯಂತ ಹೆಚ್ಚಾಗಿ—ಭಕ್ತಿಮಾಡಬೇಕೆಂದೂ, ಉಳಿದ ಬ್ರಹ್ಮಾದಿ ದೇವತೆಗಳಲ್ಲಿ ತಾರತಮ್ಯಾನುಸಾರ ಅವರವರ ಘಟ್ಟಕ್ಕೆ ತಕ್ಕಂತೆ ಹೆಚ್ಚು-ಕಡಿಮೆ

**ಯಸ್ಸಂಧತ್ತೇ ವಿರಿಂ(ಚಿ)ಚ-ಶ್ವಸನ-ವಿಹಗಪಾ-ನಂತ-**
**ರುದ್ರೇಂದ್ರ-ಪೂರ್ವೇ-**
**ಷ್ವಾಧ್ಯಾಯಂ-ಸ್ತಾರತಮ್ಯಂ ಸ್ಫುಟಮವತಿ ಸದಾ**
**ವಾಯುರಸ್ಮದ್ಗುರುಸ್ತಮ್ ॥ ೧೫ ॥**

---

ಭಕ್ತಿಮಾಡಬೇಕಲ್ಲದೆ ಅವರೆಲ್ಲರೂ ವಿಷ್ಣುಭಕ್ತರ ವರ್ಗಕ್ಕೆ ಸೇರಿದವರೆಂದು ತಿಳಿದುಕೊಂಡೇ ಭಕ್ತಿಮಾಡಬೇಕೆಂದೂ, ಆಗ ಮಾತ್ರವೇ ಆ ಭಕ್ತಿ ಫಲಿಸುವುದೆಂದೂ ಈ ಶ್ಲೋಕದಲ್ಲಿ ನಿರೂಪಣೆ ಮಾಡುತ್ತಾರೆ.

**ಪ್ರಧಾನವಾಕ್ಯ**—ಯಃ ಶ್ರೀಧರಾಭ್ಯಾಂ ಆಶ್ಲಿಷ್ಟೇ ತತ್ರ (ವಿಷ್ಣೌ) ಗರಿಷ್ಠಾಂ ಭಕ್ತಿಂ ಸಂಧತ್ತೇ, ಅಥ ವಿರಿಂಚಿ....ರುದ್ರೇಂದ್ರ ಪೂರ್ವೇಷು ತಾರತಮ್ಯಂ ಆಧ್ಯಾಯನ್ (ಭಕ್ತಿಂ ಸಂಧತ್ತೇ), ತಂ ವಾಯುಃ ಸ್ಫುಟಂ ಅವತಿ= ಯಾವನು ಶ್ರೀದೇವಿ-ಭೂದೇವಿಯರಿಂದ ಆಲಿಂಗಿತನಾದ ಶ್ರೀವಿಷ್ಣುವಿನಲ್ಲಿ (ಮಾತ್ರ) ಅತ್ಯಧಿಕವಾದ ಭಕ್ತಿಯನ್ನು ಮಾಡುತ್ತಾನೋ ಅನಂತರ ಬ್ರಹ್ಮ-ರುದ್ರಾದಿ ದೇವತೆಗಳಲ್ಲಿ ತಾರತಮ್ಯವನ್ನು ತಿಳಿದುಕೊಂಡು (ಅದಕ್ಕೆ ಅನುಗುಣವಾಗಿ) ಭಕ್ತಿಮಾಡುತ್ತಾನೋ ಅವನನ್ನು ಮುಖ್ಯಪ್ರಾಣದೇವರು ಬಿಡದೆ ಕಾಪಾಡುತ್ತಾರೆ.

**ಅನ್ವಯಾರ್ಥ**—**ಯಃ**-ಯಾವನು, **ವಿಷ್ಣೋಃ**-ಶ್ರೀವಿಷ್ಣುವು, **ಅಖಿಲ-ಗುಣಗಣೈಃ**-ಜ್ಞಾನ, ಆನಂದ, ಬಲಾದಿ ಸಮಸ್ತ ಗುಣಗಳಿಂದಲೂ, **ಅತ್ಯುತ್ತಮತ್ವಾತ್**-ಸರ್ವೋತ್ತಮನಾದ್ದರಿಂದ, **ಸದಾ**-ಅನಾದ್ಯನಂತಕಾಲದಲ್ಲೂ, ಶ್ರೀಧರಾಭ್ಯಾಂ—**ಶ್ರೀ**-ಶ್ರೀದೇವಿಯಿಂದಲೂ, **ಧರಾಭ್ಯಾಂ**-ಭೂದೇವಿಯಿಂದಲೂ, **ಸಂಶ್ಲಿಷ್ಟೇ**-ಆಲಿಂಗತನಾದ (ಸಮೇತನಾದ), **ತತ್ರ**-ಆ ವಿಷ್ಣುವೊಬ್ಬನಲ್ಲಿ ಮಾತ್ರ, **ಗರಿಷ್ಠಾಂ**-ನಿರವಧಿಕವಾಗಿ ಹೆಚ್ಚಾದ, **ಭಕ್ತಿಂ**-ಭಕ್ತಿಯನ್ನು, **ಸದಾ**-ನಿತ್ಯವಾಗಿ, **ಸಂಧತ್ತೇ**-ಮಾಡುತ್ತಾನೋ (ಇಟ್ಟುಕೊಂಡಿರುತ್ತಾನೋ), **ಅಥ**-ಅನಂತರ, **ಅಮುಂ**-ಈ ವಿಷ್ಣುವಿನ, **ಪರಿವಾರಾತ್ಮನಾ**-ಪರಿವಾರಕ್ಕೆ (ದಾಸವರ್ಗಕ್ಕೆ) ಸೇರಿದವರಾದ ಕಾರಣ, **ಸೇವಕೇಷು**-ಶ್ರೀಹರಿಯ ಕಿಂಕರರಾದ (ಭೃತ್ಯರಾದ), ವಿರಿಂ(ಚಿ)ಚ....ಪೂರ್ವೇಷು—**ವಿರಿಂ(ಚಿ)ಚ**-

ಬ್ರಹ್ಮದೇವರು, **ಶ್ವಸನ**–ವಾಯುದೇವರು, **ವಿಹಗ**-ಪ–ಪಕ್ಷಿಗಳ ಒಡೆಯನಾದ ಗರುಡದೇವರು, **ಅನಂತ**–ಶೇಷದೇವರು, **ರುದ್ರ**–ಶಿವ, **ಇಂದ್ರ**–ದೇವೇಂದ್ರ, **ಪೂರ್ವೇಷು** ಇವರೇ ಮೊದಲಾದ ದೇವತೆಗಳಲ್ಲಿ, **ತಾರತಮ್ಯಂ**–ನಿಚೋಚ್ಚ ಭಾವವನ್ನು (ದೊಡ್ಡವರು, ಅದಕ್ಕೂ ದೊಡ್ಡವರು ಎಲ್ಲರಿಗಿಂತಲೂ ದೊಡ್ಡವರು ಎಂಬ ಭೇದದ ಕ್ರಮವನ್ನು), **ಅಧ್ಯಾಯನ್**–ಚೆನ್ನಾಗಿ ತಿಳಿದು, **(ಭಕ್ತಿಂ)**–ಅದಕ್ಕೆ ತಕ್ಕಂತೆ ಹೆಚ್ಚು ಹೆಚ್ಚು ಭಕ್ತಿಯನ್ನು, **(ಸಂಧತ್ತೇ)**–ಮಾಡುತ್ತಾನೋ, **ತಂ**–ಅವನನ್ನು, **ಅಸ್ಮದ್‌ಗುರುಃ**–ನಮ್ಮೆಲ್ಲರಿಗೂ ಮುಖ್ಯ ಗುರುಗಳಾದ, **ವಾಯುಃ**–ಮುಖ್ಯಪ್ರಾಣದೇವರು, **ಸದಾ**–ನಿರಂತರವಾಗಿ, **ಸ್ಫುಟಂ**–ನಿಸ್ಸಂದೇಹವಾಗಿ, **ಅವತಿ**–ರಕ್ಷಿಸುತ್ತಾರೆ.

**ತಾತ್ಪರ್ಯ**—ಈ ಶ್ಲೋಕದ ಪ್ರಾರಂಭದಲ್ಲಿ ಪ್ರಯುಕ್ತವಾಗಿರುವ **ವಿಷ್ಣು** ಶಬ್ದ ಅನೇಕಾರ್ಥಗರ್ಭಿತವಾಗಿದೆ. ಏಕೆಂದರೆ ಐತರೇಯೋಪನಿಷತ್ತಿನಲ್ಲಿ (ಮೂರನೇ ಆರಣ್ಯಕದ ಕಡೆಯ ಭಾಗದಲ್ಲಿ) ವಿಷ್ಣುಶಬ್ದದ ಮಹಿಮೆ ಅಪಾರವಾಗಿದೆಯೆಂದು ನಿರೂಪಿತವಾಗಿದೆ. ಅದರಂತೆ ವಿಷ್ಣುಶಬ್ದದಲ್ಲಿರುವ **ವಿ** ಎಂಬ ಉಪಪದವು ವಿಶಿಷ್ಟತ್ವವನ್ನು (ಮಿಕ್ಕ ಎಲ್ಲರಿಗಿಂತ ಹೆಚ್ಚುಗಾರಿಕೆಯನ್ನು) ತೋರಿಸಿದರೆ, ಅದರಲ್ಲಿರುವ **ಣಕಾರವು*** ಬಲಾಧಿಕ್ಯವನ್ನೂ **ಷಕಾರವು** ರಮಾಬ್ರಹ್ಮಾದಿ ಸಕಲರಿಗೂ ಪ್ರೇರಕನೆಂಬುದನ್ನೂ ದೇಶತಃ ಕಾಲತಃ ಗುಣತಃ ಪರಿಪೂರ್ಣನೆಂಬುದನ್ನೂ ಹೇಳುತ್ತದೆ. ಹೀಗೆ ಲೋಕದಲ್ಲಿ ಪ್ರಚಾರದಲ್ಲಿರುವ ಸಕಲ ನಾಮಗಳೂ ಸಕಲ ಶಬ್ದಗಳೂ ವಿಷ್ಣುಶಬ್ದದ ವ್ಯಾಖ್ಯಾನವೇ ಆಗಿರುವುದರಿಂದ ಅನಂತವಾದ ಲೌಕಿಕ-ವೈದಿಕ ಶಬ್ದಗಳು ಹೇಳುವ ಅನಂತಗುಣಗಳಿಂದ ಆ ವಿಷ್ಣು ಪರಿಪೂರ್ಣನಾಗಿದ್ದಾನೆಂದೂ ಅತಏವ ಅವನು (ಅವನೊಬ್ಬನೇ) ಸರ್ವೋತ್ತಮನೆಂದೂ ಸಿದ್ಧವಾಗುತ್ತದೆ. ಹೀಗೆ ಅವನೊಬ್ಬನೇ ಸರ್ವೋತ್ತಮನಾದ್ದರಿಂದ ಅವನಲ್ಲಿ ನಿರವಧಿಕವಾಗಿ ಎಂದರೆ ಮಿಕ್ಕ ಎಲ್ಲರಲ್ಲಿ ಮಾಡುವ ಭಕ್ತಿಗಿಂತಲೂ ಅನಂತಪಟ್ಟು ಹೆಚ್ಚಾಗಿ ಭಕ್ತಿಮಾಡಬೇಕು. ಇದು ಮೊದಲನೆಯ ಪ್ರಮೇಯ.

---

*ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ

ಆದರೆ ಆ ವಿಷ್ಣು ಒಲಿಯಬೇಕಾದರೆ ಅವನ ಭೃತ್ಯರೂ ಭಕ್ತರೂ ಆದ ರಮಾ-ಬ್ರಹ್ಮಾದಿ ದೇವತೆಗಳಲ್ಲೂ, ಅಲ್ಲದೆ ಅವರ ಭಕ್ತರಾದ ಧ್ರುವ ಪ್ರಹ್ಲಾದ ನಾರದ ಪರಾಶರಾದಿಗಳಲ್ಲೂ ಯಥಾಯೋಗ್ಯವಾಗಿ ಭಕ್ತಿಮಾಡಲೇಬೇಕು, ಇಲ್ಲ ದಿದ್ದರೆ ಆ ವಿಷ್ಣು ಕೈಹಿಡಿಯುವುದೇ ಇಲ್ಲವೆಂದು ಮಹಾಭಾರತದಲ್ಲಿ ಹೇಳಿದೆ. ಅದರಿಂದ ರಮಾ-ಬ್ರಹ್ಮಾದಿ ದೇವತೆಗಳಲ್ಲೂ ವಿಷ್ಣುಭಕ್ತರಾದ ಧ್ರುವ-ಪ್ರಹ್ಲಾದಾದಿಗಳಲ್ಲೂ ಭಕ್ತಿಮಾಡಬೇಕೆಂದು ನಿಶ್ಚಿತವಾದಹಾಗಾಯಿತು. ಆ ದೇವತೆಗಳಲ್ಲೆಲ್ಲಾ ಸರ್ವೋತ್ತಮಳೂ ಅನಾದಿನಿತ್ಯಳೂ ಆದ ಲಕ್ಷ್ಮೀದೇವಿ ಭಾಗ್ಯದೇವತೆಯಾದ್ದರಿಂದಲೂ ಸಕಲ ವಾಙ್ಮನೋನಿಯಾಮಕಳೂ ಆಗಿರುವುದ ರಿಂದ ಅವಳಲ್ಲೂ ಭಕ್ತಿಮಾಡಬೇಕಾದ್ದು ವಿಹಿತವಾಗಿದ್ದರೂ ಕೇವಲ ಅವಳೊಬ್ಬ ಳಲ್ಲೇ ಭಕ್ತಿಮಾಡುವುದು "ಕ್ಲೇಶೋಽಧಿಕತರಸ್ತೇಷಾಂ" ಎಂದು ಭಗವದ್ಗೀತೆ ಯಲ್ಲಿ (೧೨೦) ಹೇಳಿದಂತೆ ನಿಷಿದ್ಧವಾಗಿದೆ. ಆದಕಾರಣ ಅವಳನ್ನು ವಿಷ್ಣು ಪತ್ನಿ ಎಂಬುದಾಗಿ ತಿಳಿದೇ ವಿಷ್ಣುವಿನ ಜೊತೆಯಲ್ಲೇ ಭಕ್ತಿಮಾಡಬೇಕೆಂದು ಸೂಚಿಸುವುದಕ್ಕಾಗಿ 'ಸಂಶ್ಲಿಷ್ಟೇ ಶ್ರೀಧರಾಭ್ಯಾಂ'—'ಶ್ರೀದೇವಿ-ಭೂದೇವಿಯ ರಿಂದ ಸಮೇತನಾದ ವಿಷ್ಣುವಿನಲ್ಲಿ' ಎಂದು ಹೇಳಿದರು.

ಕಡೆಯದಾಗಿ ಬ್ರಹ್ಮಾದಿ ದೇವತೆಗಳಲ್ಲಿ ಹೇಗೆ ಭಕ್ತಿಮಾಡಬೇಕೆಂಬುದನ್ನು ತೋರಿಸಿಕೊಡುತ್ತಾರೆ. ಆ ಬ್ರಹ್ಮಾದಿ ದೇವತೆಗಳೆಲ್ಲರೂ ವಿಷ್ಣುವಿನ ಭೃತ್ಯರೂ-ವಿಷ್ಣುಭಕ್ತರೂ ಆಗಿದ್ದು ಅವರೆಲ್ಲ ವಿಷ್ಣುಪರಿವಾರಕ್ಕೆ ಸೇರಿದವರೆಂದು ತಿಳಿದೇ ಭಕ್ತಿಮಾಡಬೇಕೇ ವಿನಾ ಅವರೇ ಸ್ವತಂತ್ರರೆಂದು ತಿಳಿದು ಎಂದಿಗೂ ಮಾಡ ಬಾರದು. ಏಕೆಂದರೆ ವಸ್ತುತಃ ಅಂಥಾ ಭಕ್ತಿಯನ್ನು ಅವರೇ ಸ್ವೀಕರಿಸುವು ದಿಲ್ಲ, ಆ ಭಕ್ತಿ ದೈತ್ಯರ ಪಾಲಾಗಿ ಅನರ್ಥಕ್ಕೇ ಕಾರಣವಾಗುತ್ತದೆ. ಅಲ್ಲದೆ ಬ್ರಹ್ಮಾದಿಗಳಿಂದ ಹಿಡಿದು ತೃಣಜೀವರ ಪರ್ಯಂತವಾಗಿ ತಾರತಮ್ಯವೆಂಬ ಉಚ್ಚ-ನೀಚರೆಂಬ ಬೇರೆ ಬೇರೆ ಹಂತಗಳಿವೆ. ಮೇಲು-ಮೇಲಿನ ಹಂತದ ಬ್ರಹ್ಮರುದ್ರಾದಿಗಳಲ್ಲಿ ಅವರ ಹಂತಕ್ಕೆ ತಕ್ಕಂತೆ ಹೆಚ್ಚು ಹೆಚ್ಚು ಭಕ್ತಿಯನ್ನೂ ಕೆಳ-ಕೆಳಗಿನ ಹಂತದ ಚಂದ್ರ ಗಣೇಶಾದಿಗಳಲ್ಲಿ ಅವರ ಮಟ್ಟಕ್ಕೆ ತಕ್ಕಂತೆ ಕಡಿಮೆ-ಕಡಿಮೆ ಭಕ್ತಿಯನ್ನೂ ಮಾಡಬೇಕು. ದೇವತೆಗಳಲ್ಲಿ ಮಾತ್ರವಲ್ಲ-

**ತತ್ತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋ**
**ಯೋಗ್ಯತಾತಾರತಮ್ಯಾ-**
**ದಾಧತ್ಸೇ ಮಿಶ್ರಬುದ್ಧೀಂ-ಸ್ತ್ರಿದಿವ-ನಿರಯಭೂ-ಗೋಚರಾನ್**
**ನಿತ್ಯಬದ್ಧಾನ್ ।**

---

ವಿಷ್ಣುಭಕ್ತರಲ್ಲೂ ತನಗಿಂತ ಉತ್ತಮರಾದ ಸಮಸ್ತರಲ್ಲೂ ಅವರವರ ಯೋಗ್ಯತೆಗೆ ತಕ್ಕಂತೆ ಉಚಿತವಾದ ಭಕ್ತಿಯನ್ನು ಮಾಡಬೇಕು. ಹೀಗೆ ಯಾರು ತಾರತಮ್ಯಾನುಗುಣವಾಗಿ ಬ್ರಹ್ಮಾದಿ ದೇವತೆಗಳಲ್ಲಿ ಭಕ್ತಿಮಾಡುತ್ತಾ ಸರ್ವೋತ್ತಮನಾದ ಲಕ್ಷ್ಮೀಪತಿಯಾದ ಶ್ರೀವಿಷ್ಣುವಿನಲ್ಲಿ ಎಲ್ಲರಿಗಿಂತಲೂ ಅನಂತಪಟ್ಟು ಹೆಚ್ಚಾಗಿ-ನಿರವಧಿಕವಾಗಿ ಭಕ್ತಿಮಾಡುವನೋ ಅಂಥವನನ್ನು ಮಾತ್ರ ವಾಯುದೇವರು ಸಂರಕ್ಷಿಸುತ್ತಾರೆ. ತಾರತಮ್ಯ ತಿಳಿಯದೆ ಮಾಡುವ ಭಕ್ತಿಯಾಗಲಿ ಬ್ರಹ್ಮ-ರುದ್ರಾದಿಗಳೇ ಸ್ವತಂತ್ರರೆಂದು ತಿಳಿದು ಮಾಡುವ ಭಕ್ತಿಯಾಗಲಿ ತಾರಕವಲ್ಲ-ಅನರ್ಥಕ್ಕೇ ಕಾರಣವಾಗುತ್ತದೆಯೆಂದೂ ಅರ್ಥಾತ್ ಸಿದ್ಧವಾಗುತ್ತದೆ.

**ಶ್ಲೋಕ ೧೬—(ತತ್ತ್ವಜ್ಞಾನ್) ಜೀವತ್ರೈವಿಧ್ಯ ಸಮರ್ಥನೆ**

**ಅವತಾರಿಕೆ**—ಪ್ರಾರಂಭದಲ್ಲಿ ಮೂರನೇ ಶ್ಲೋಕದಲ್ಲಿಯೇ ಜೀವರು ಮೂರು ವಿಧವಾಗಿದ್ದಾರೆಂದೂ ಅವರು ಮೂವರಿಗೂ ಬೇರೆ ಬೇರೆ ಗತಿಯಾಗುವುದೆಂದೂ ಹೇಳಿದರು. ಮುಂದೆ ಅದನ್ನೇ ವಿಸ್ತಾರಮಾಡಿ ಒಂಭತ್ತರಿಂದ ಹದಿಮೂರರವರೆಗಿನ ಐದು ಶ್ಲೋಕಗಳಲ್ಲಿ ಬೇರೆಬೇರೆಯಾಗಿ ವರ್ಣಿಸಿದರು. ಈ ಜೀವತ್ರೈವಿಧ್ಯವೆಂಬ ಪ್ರಮೇಯವು ಮಧ್ವಸಿದ್ಧಾಂತದಲ್ಲಿ ಬಹು ಮುಖ್ಯವಾದ ವಿಚಾರವಾದ್ದರಿಂದ ಪುನಃ ಅದನ್ನೇ ನೆನಪುಮಾಡಿ ಪೀಠಿಕಾಭಾಗವನ್ನು ಮುಗಿಸುತ್ತಾರೆ.

**ಪ್ರಧಾನವಾಕ್ಯ**—ಈ ಶ್ಲೋಕದಲ್ಲಿ ನಾಲ್ಕು ಸ್ವತಂತ್ರ ವಾಕ್ಯಗಳಿವೆ— ೧) ಗುರೋ, ತತ್ತ್ವಜ್ಞಾನ್ ಸುಖಯಸಿ = ಹೇ ಗುರುಗಳೇ ತತ್ತ್ವಜ್ಞರಾದ ಸಾತ್ತ್ವಿಕ ಜೀವರಿಗೆ ಸುಖ ದೊರಕುವಂತೆ ಮಾಡುವಿರಿ. ೨) ಮಿಶ್ರಬುದ್ಧೀನ್ ನಿತ್ಯಬದ್ಧಾನ್ ಆಧತ್ಸೇ-ರಾಜಸ ಸ್ವಭಾವದವರನ್ನು ನಿತ್ಯಸಂಸಾರಿಗಳನ್ನಾಗಿ ಮಾಡುವಿರಿ. ೩) ಅನ್ಯಥಾಜ್ಞಾನ್ ತಮಸಿ ದುಃಖಯಸಿ-ತಾಮಸರನ್ನು

ನಿತ್ಯನರಕದಲ್ಲಿ ದುಃಖ ಅನುಭವಿಸುವಂತೆ ಮಾಡುವಿರಿ. ೪) ಇತ್ಥಂ ಆಕರ್ಣ ಯಾಮಃ–ಎಂದು ನಾವು ಕೇಳಿದ್ದೇವೆ. ಮೊದಲ ಮೂರು ವಾಕ್ಯಗಳಿಗೂ 'ಯೋಗ್ಯತಾ ತಾರತಮ್ಯಾತ್' ಎಂಬುದು ಅನ್ವಯಿಸುತ್ತದೆ.

**ಅನ್ವಯಾರ್ಥ—ಗುರೋ**-ರುದ್ರಾದಿಗಳಿಗೂ ಗುರುಗಳಾದ ಹೇ ಮುಖ್ಯಪ್ರಾಣದೇವರೇ! (ತ್ವಂ) ನೀವು, **ವಿಷ್ಣೋಃ**-ಶ್ರೀಹರಿಯ, **ಆಜ್ಞಾಭಿಃ**–ಆಜ್ಞಾಪ್ರಕಾರ, **ತತ್ತ್ವಜ್ಞಾನ್**–ತತ್ತ್ವಶಾಸ್ತ್ರವನ್ನು ತಿಳಿದಂಥಾ ಸಾತ್ವಿಕ ಜನರನ್ನು, **ಮುಕ್ತಿಭಾಜಃ**–ಮೋಕ್ಷಕ್ಕೆ ಭಾಗಿಗಳನ್ನಾಗಿ ಮಾಡಿ, **ಯೋಗ್ಯತಾ ತಾರತಮ್ಯಾತ್**–ಅವರವರ ಯೋಗ್ಯತೆಗೆ ಅನುಗುಣವಾಗಿಯೇ, **ಸುಖಯಸಿ**–ಸುಖಿಗಳನ್ನಾಗಿ ಮಾಡುವಿರಿ. **ಮಿಶ್ರಬುದ್ಧೀನ್**–ರಾಜಸ ಸ್ವಭಾವದ ಜನಗಳನ್ನು ಯೋಗ್ಯತಾ–ತಾರತಮ್ಯಾತ್ (ಹಿಂದಿನಂತೆಯೇ ಅರ್ಥ) **ನಿತ್ಯಬದ್ಧಾನ್**–ನಿರಂತರವಾಗಿ ಸುಖ-ದುಃಖಗಳೆರಡಕ್ಕೂ ಭಾಗಿಗಳಾಗುವಂತೆ ಮಾಡಿ, ತ್ರಿದಿವ....ಗೋಚರಾನ್—**ತ್ರಿದಿವ**–ಸ್ವರ್ಗ, **ನಿರಯ**–ನರಕ, **ಭೂ**–ಭೂಮಿ, ಈ ಮೂರರಲ್ಲೂ, **ಗೋಚರಾನ್**–ಸುತ್ತಾಡುವವರನ್ನಾಗಿ, **ಆಧತ್ಸೇ**–ಮಾಡುವಿರಿ. ಅಲ್ಲದೆ, ಯೋಗ್ಯತಾ ತಾರತಮ್ಯಾತ್–ಅವರವರ ಯೋಗ್ಯತೆಗೆ ತಕ್ಕಂತೆ, **ಸುಖಯಸಿ**–ಸುಖಪಡುವಂತೆಯೂ ಮಾಡುವಿರಿ, **ದುಃಖಯಸಿ**–ದುಃಖಪಡುವಂತೆಯೂ ಮಾಡುವಿರಿ. **ಅನ್ಯಥಾಜ್ಞಾನ್**–ಮಿಥ್ಯಾಜ್ಞಾನವುಳ್ಳ ತಾಮಸ ಜೀವಿಗಳನ್ನು, ತಾಮಿಸ್ರಾಂಧಾದಿಕಾಖ್ಯೇ—**ತಾಮಿಸ್ರ**–ತಾಮಿಸ್ರವೆಂದೂ, **ಅಂಧ-ಆದಿಕ**–ಪ್ರಾರಂಭದಲ್ಲಿ ಅಂಧ ಎಂದು ಹೆಸರುಳ್ಳ. ಅರ್ಥಾತ್ ಅಂಧತಾಮಿಸ್ರ ಎಂಬ, **ಆಖ್ಯೇ**–ಹೆಸರುಳ್ಳ, (ಪಾಠಾಂತರ) ತಾಮಿಸ್ರಾಂಧಿಕಾಖ್ಯೇ—**ತಾಮಿಸ್ರ**–ತಾಮಿಸ್ರವೆಂದೂ, **ಅಂಧ ಅಧಿಕ**-ಅಂಧ ಎಂಬುದು ಹೆಚ್ಚಿಗೆ ಇರುವ ಎಂದರೆ ಅಂಧತಾಮಿಸ್ರ ಎಂದು. **ಆಖ್ಯೇ**–ಹೆಸರುಳ್ಳ, **ತಮಸಿ**–ಅಂಧಕಾರಮಯವಾದ ನಿತ್ಯನರಕದಲ್ಲಿ, **ಯೋಗ್ಯತಾ ತಾರತಮ್ಯಾತ್**–ಅವರವರ ಯೋಗ್ಯತೆಗೆ ತಕ್ಕಂತೆ, **ಸುಬಹುಲಂ**–ಬಹಳ ಹೆಚ್ಚು ಹೆಚ್ಚಾಗಿ, **ದುಃಖಯಸಿ**–ದುಃಖಕ್ಕೆ ಗುರಿಮಾಡುತ್ತೀರಿ. **ಇತ್ಥಂ**–ಹೀಗೆಂದು, **ಶ್ರುತಿಶತಂ**–ನೂರಾರು ವೇದವಾಕ್ಯಗಳಿಂದಲೂ, **ಇತಿಹಾಸಾದಿ ಚ**–ಮಹಾಭಾರತ ಮೂಲರಾಮಾಯಣ ಎಂಬ ಇತಿಹಾಸ ಗ್ರಂಥಗಳಿಂದಲೂ, ಪುರಾಣಗಳಿಂದಲೂ, **ಆಕರ್ಣಯಾಮಃ**–ಕೇಳುತ್ತೇವೆ.

**ತಾಮಿಸ್ರಾಂಧಾಧಿ(ದಿ)ಕಾಖ್ಯೇ ತಮಸಿ ಸುಬಹುಲಂ**
**ದುಃಖಯಸ್ಯನ್ಯಥಾಜ್ಞಾನ್**
**ವಿಷ್ಣೋರಾಜ್ಞಾಭಿರಿತ್ಥಂ ಶ್ರುತಿಶತಮಿತಿಹಾ-ಸಾದಿ**
**ಚಾಕರ್ಣಯಾಮಃ ॥ ೧೬ ॥**

---

ತಾತ್ಪರ್ಯ—ಹೇ ಗುರುಗಳೇ, ಶ್ರೀವಿಷ್ಣುವಿನ ಆಜ್ಞೆಯಿಂದಲೇ ಜೀವರು ಸ್ವಾಭಾವಿಕವಾಗಿಯೇ ಸಾತ್ತ್ವಿಕರೆಂದೂ ರಾಜಸರೆಂದೂ ತಾಮಸರೆಂದೂ ಮೂರು ವಿಧವಾಗಿದ್ದಾರೆ. ಅವರವರು ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಒಳ್ಳೆಯ, ಕೆಟ್ಟ ಅಥವಾ ಮಿಶ್ರವಾದ ಕರ್ಮಗಳಲ್ಲೇ ಹೆಚ್ಚಾಗಿ ಪ್ರವೃತ್ತರಾಗಿ ಸಾಧನ ಮಾಡಿಕೊಳ್ಳುತ್ತಾರೆ. ಕೊನೆಗೆ ಅವರವರ ಸಾಧನೆಗೆ ತಕ್ಕಂತೆ ಕೇವಲ ಸುಖವನ್ನೋ ಕೇವಲ ದುಃಖವನ್ನೋ ಅಥವಾ ದುಃಖ-ಸುಖ ಎರಡನ್ನೂ ಪಡೆಯುತ್ತಾರೆ. ಇದೂ ಸಹ ವಿಷ್ಣುವಿನ ಆಜ್ಞೆಯೇ. ಆದ್ದರಿಂದ ಇದೆಲ್ಲವೂ ಹಾಗೆ ಹಾಗೆಯೇ ಇರುವುದಲ್ಲದೆ ಎಂದೆಂದಿಗೂ ವ್ಯತ್ಯಾಸ ಹೊಂದ ತಕ್ಕದ್ದಲ್ಲವೆಂದೂ ನೂರಾರು ಶ್ರುತಿವಾಕ್ಯಗಳು ಹೇಳುತ್ತವೆಯಲ್ಲದೆ ಈ ವಿಷಯಗಳಷ್ಟು ಮಹಾಭಾರತ-ಮೂಲರಾಮಾಯಣಗಳೆಂಬ ಇತಿಹಾಸಗಳಲ್ಲೂ ಪಂಚರಾತ್ರ ಪುರಾಣಾದಿ ಗ್ರಂಥಗಳಲ್ಲೂ ಪ್ರತಿಪಾದಿತವಾಗಿವೆ. ಆದಕಾರಣ ನೀವು ಆ ವಿಷ್ಣುವಿನ ಆಜ್ಞೆಯನ್ನು ಅನುಸರಿಸಿಯೇ ಸಾತ್ತ್ವಿಕರಾದ ಜೀವಿಗಳಿಗೆ ತತ್ತ್ವಜ್ಞಾನವನ್ನು ಕೊಟ್ಟು ಸಾಧನಮಾಡಿಸಿ ಮೋಕ್ಷ ದೊರಕುವಂತೆ ಮಾಡಿ ಮೋಕ್ಷದಲ್ಲಿ ತಮ್ಮ ತಮ್ಮ ಯೋಗ್ಯತಾನುಸಾರ ಸ್ವರೂಪಾನಂದವನ್ನು ಅನುಭವಿಸುವಂತೆ ಅನುಗ್ರಹ ಮಾಡುತ್ತೀರಿ. ರಾಜಸ ಸ್ವಭಾವದ ಜೀವಿಗಳಿಂದ ಪಾಪ ಪುಣ್ಯ ಎರಡೂ ಸಾಧನಮಾಡಿಸಿ ಸ್ವರ್ಗ-ನರಕ-ಭೂಮಿಗಳಲ್ಲಿ ಸುತ್ತಾಡಿಸುತ್ತಾ ಸುಖ-ದುಃಖಗಳೆರಡನ್ನೂ ಅನುಭವಿಸುತ್ತಾ ಸಂಸಾರದ ಬಂಧನಕ್ಕೇ ಸಿಕ್ಕಿಕೊಂಡಿರುವಂತೆ ಮಾಡಿಸುತ್ತೀರಿ. ಕಡೆಯ ವರ್ಗದ ಅನ್ಯಥಾ ಜಾನವುಳ್ಳ ತಾಮಸ ಜೀವಿಗಳಿಂದ ಪಾಪಸಾಧನೆಯನ್ನೇ ಹೆಚ್ಚಾಗಿ ಮಾಡಿಸಿ ಅವರು ಅಂಧಂತಮಸ್ಸಿನಲ್ಲಿ ಬಿದ್ದು ವರ್ಣನಾತೀತವಾದ ದುಃಖವನ್ನು ಅನುಭವಿಸುವಂತೆಯೂ ಮಾಡುತ್ತೀರಿ. ಹೀಗೆ ತ್ರಿವಿಧ ಜೀವರಿಂದ ತ್ರಿವಿಧ ಕರ್ಮಗಳನ್ನು ಮಾಡಿಸಿ ಅವರವರಿಗೆ ತಕ್ಕ ಗತಿಯನ್ನು ಕೊಟ್ಟು, ಹರಿಯ ಆಜ್ಞೆಯನ್ನು ಕಿಂಚಿತ್ತೂ ಉಲ್ಲಂಘಿಸದಂತೆ ಪರಿಪಾಲಿಸುತ್ತೀರಿ ಎಂಬಲ್ಲಿಗೆ ಪೀಠಿಕಾ ಭಾಗವು ಸಮಾಪ್ತಿಯಾಯಿತು.

**ವಂದೇಽಹಂ ತಂ ಹನೂಮಾ-ನಿತಿ ಮಹಿತಮಹಾ-ಪೌರುಷೋ ಬಾಹುಶಾಲೀ**
**ಖ್ಯಾತಸ್ತೇಽಗ್ರ್ಯೋಽವತಾರಃ ಸಹಿತ ಇಹ ಬಹು-ಬ್ರಹ್ಮಚರ್ಯಾದಿಧರ್ಮೈಃ ।**

---

## ಹನುಮದವತಾರ ನಿರೂಪಣೆ (ಶ್ಲೋಕ ೧೭ ರಿಂದ ೨೧)

### ಲೇಖಕನ ಮಂಗಳಾಚರಣೆ

ರಾಮಭಕ್ತಾಗ್ರಣೀರ್ಜ್ಞಾನೀ ಹನುಮಾನ್ ಮಾರುತಾತ್ಮಜಃ ।
ಬುದ್ಧಿಂ ದಿಶತು ಮೇ ದಿವ್ಯಾಂ ಶ್ಲೋಕಾರ್ಥಗ್ರಹಣೇಂಜನಾ ॥

ಅರ್ಥ :—ರಾಮಭಕ್ತಾಗ್ರೇಸರರೂ ಜ್ಞಾನಿಗಳೂ ಆದ ಹನುಮಂತದೇವರು ವಾಯು ಕುಮಾರರು. ಅವರು ನನಗೆ ಈ ಶ್ಲೋಕಗಳ ಅರ್ಥವನ್ನು ಗ್ರಹಿಸುವುದಕ್ಕೆ ಅನುಕೂಲವಾಗಿ ನನಗೆ ದಿವ್ಯವಾದ ಬುದ್ಧಿಯನ್ನು ಅನುಗ್ರಹಿಸಲಿ.

ವಾಯುನಾ ವಪುಷೇಽಧಾಯಿ ಪ್ರಥಮಂ ಹನುಮಾನಿತಿ ।
ತಸ್ಯರೂಪಸ್ಯ ಮಹಿಮಾ ವರ್ಣ್ಯತೇ ಶ್ಲೋಕ ಪಂಚಕೇ ॥

ಅರ್ಥ :—ವಾಯುದೇವರು ತ್ರೇತಾಯುಗದಲ್ಲಿ ಹನುಮಂತನಾಗಿ ಅವತಾರ ಮಾಡಿದರು. ಆ ಹನುಮದ್ರೂಪದ ಮಹಿಮೆಯು ವಾಯುಸ್ತುತಿಯಲ್ಲಿ ಮುಂದಿನ ಐದು ಶ್ಲೋಕಗಳಲ್ಲಿ ವರ್ಣಿತವಾಗಿದೆ.

**ಶ್ಲೋಕ ೧೭**—(ವಂದೇಽಹಮ್) ಹೀಗೆ ಪೀಠಿಕಾಭಾಗದ ಹದಿನಾರು ಶ್ಲೋಕಗಳಲ್ಲಿ ವಾಯುದೇವರ ಮೂಲರೂಪದ ಮಹಿಮೆಯನ್ನೂ ಮಧ್ವಾಚಾರ್ಯರ ಮಹಿಮೆಯನ್ನೂ ನಿರೂಪಣೆಮಾಡಿ ಅವರ ಹನುಮ-ಭೀಮ-ಮಧ್ವ ಎಂಬ ಮೂರು ಅವತಾರಗಳ ಚರಿತ್ರೆಯನ್ನು ಕ್ರಮವಾಗಿ ನಿರೂಪಿಸಲು ಆರಂಭಿಸಿ ಈಗ ಮೊದಲನೆಯ ಹನುಮದವತಾರದ ಮಹಿಮೆಯನ್ನು ಆರಂಭಿಸುತ್ತಾರೆ.

**ಪ್ರಧಾನವಾಕ್ಯ**—ಯಃ ತೇ ಹನೂಮಾನ್ ಇತಿ ಅಗ್ರ್ಯಃ ಅವತಾರಃ, ತಂ ಅಹಂ ವಂದೇ-ಯಾವ ನಿಮ್ಮ ಹನುಮಂತನೆಂಬ ಪ್ರಥಮಾವತಾರವಿದೆಯೋ ಅದನ್ನು ನಾನು ವಂದಿಸುತ್ತೇನೆ.

**ಸಸ್ನೇಹಾನಾಂ ಸಹಸ್ವಾ-ನಹರಹ-ರಹಿತಂ ನಿರ್ದಹನ್ ದೇಹಭಾಜಾ(ಂ)-**
**ಮಂಹೋ (ಅಂಹೋ) ಮೋಹಾಪಹೋ ಯಃ ಸ್ಪೃಹಯತಿ**
**ಮಹತೀಂ ಭಕ್ತಿಮದ್ಯಾಪಿ ರಾಮೇ || ೧೭ ||**

---

**ಅನ್ವಯಾರ್ಥ**—(ವಾಯೋ-ಎಲೈ ವಾಯುದೇವರೇ!), **ಯಃ**-ಯಾವ, **ತೇ**-ನಿಮ್ಮ ೧) ಮಹಿತ....ಪೌರುಷಃ—**ಮಹಿತ**-ಸಕಲರಿಂದಲೂ ಪೂಜ್ಯವಾದ (ಸನ್ಮಾನಿತವಾದ), **ಮಹಾ**-ಹೆಚ್ಚಾದ, **ಪೌರಷಃ**-ಪರಾಕ್ರಮ ಉಳ್ಳ, ೨) **ಬಾಹುಶಾಲೀ**-ಭುಜಪರಾಕ್ರಮವುಳ್ಳ ಅಥವಾ ಅಜಾನುಬಾಹು ವಾದ, ೩) ಬಹು....ಧರ್ಮೈಃ—**ಬಹು**-ಅನೇಕವಾದ, **ಬ್ರಹ್ಮಚರ್ಯ-ಆದಿ**-ಬ್ರಹ್ಮಚರ್ಯವೇ ಮೊದಲಾದ, **ಧರ್ಮೈಃ**-ಲಕ್ಷಣಗಳಿಂದ, **ಸಹಿತಃ**-ಕೂಡಿ ದಂಥಾ, ೪) **ಸಸ್ನೇಹಾನಾಂ**-ಭಕ್ತಿಯಿಂದ ಕೂಡಿದ, **ದೇಹಭಾಜಾಂ**-ಪ್ರಾಣಿಗಳ, **ಅಹಿತಂ**-ಅನಿಷ್ಟಗಳನ್ನೂ (ಆಪತ್ತುಗಳನ್ನೂ), **ಅಹರಹಃ**-ದಿನೇ ದಿನೇ (ಆಯಾ ದಿವಸವೇ), **ನಿರ್ದಹನ್**-ಸುಟ್ಟುಹಾಕುವಂಥಾ, ೫) **ಸಹ-ಸ್ವಾನ್**-ಸಾಮರ್ಥ್ಯದಿಂದಲೂ, ಸಹನಶಕ್ತಿಯಿಂದಲೂ, ಸಹನಶೀಲತೆ ಯಿಂದಲೂ ಕೂಡಿದ, ೬) ಅಂಹೋ....ಪಹಃ—**ಅಂಹಃ**-ದುರಿತಗಳನ್ನೂ ಅಥವಾ ಪಾಪಗಳನ್ನೂ, **ಮೋಹ**-ಅಜ್ಞಾನವನ್ನೂ ಭ್ರಾಂತಿಯನ್ನೂ, **ಅಪಹಃ**-ಪರಿಹರಿಸುವಂಥಾ, ೭) **ಅಧ್ಯಾಪಿ**-ಇಂದಿನವರೆಗೂ ಕೂಡ, **ರಾಮೇ**-ಶ್ರೀರಾಮಚಂದ್ರದೇವರಲ್ಲಿ, **ಮಹತೀಂ**-ಅತ್ಯಧಿಕವಾದ, **ಭಕ್ತಿಂ**-ಭಕ್ತಿಯನ್ನು, **ಸ್ಪೃಹಯತಿ**-ಅಪೇಕ್ಷಿಸುವಂಥಾ, **ಇಹ**-ಈ ಜಗತ್ತಿನಲ್ಲಿ (ಅಥವಾ ತ್ರೇತಾಯುಗದಲ್ಲಿ), **ಹನೂಮಾನ್ ಇತಿ**-ಹನೂಮಂತನೆಂದು, **ಖ್ಯಾತಃ**-ಪ್ರಖ್ಯಾತವಾದ, **ಅಗ್ರ್ಯಃ ಅವತಾರಃ**-ಪ್ರಥಮಾವತಾರವಿದೆಯೋ, **ತಂ**-ಅದನ್ನು, **ಅಹಂ**-ನಾನು, **ವಂದೇ**-ವಂದಿಸುತ್ತೇನೆ ಮತ್ತು ಸ್ತುತಿಸುತ್ತೇನೆ.

**ತಾತ್ಪರ್ಯ**—ಹೇ ವಾಯುದೇವರೇ! ಹನುಮಂತನೆಂಬುದೇ ನಿಮ್ಮ ಪ್ರಥಮಾವತಾರದ ಹೆಸರಲ್ಲವೆ. ಆ ಹೆಸರು ಕೇವಲ ಸಾಂಕೇತಿಕವಾಗಿರದೆ ಅನ್ವರ್ಥವಾದ ಹೆಸರಾಗಿದೆ. ಹೇಗೆಂದರೆ—'ಹನು ಶಬ್ದೋ ಜ್ಞಾನವಾಚೀ' ಎಂಬ ಉಕ್ತಿಯಂತೆ ಹನು ಅಥವಾ ಹನೂ ಎಂದರೆ ಜ್ಞಾನ ಎಂದರ್ಥ. (ಹನುಃ ಹನುರ್ವಾ ಜ್ಞಾನಂ ಅಸ್ಯಸ್ತೀತಿ ಹನು(ನೂ)ಮಾನ್) ಜ್ಞಾನವುಳ್ಳವರಾದ್ದ

**ಪ್ರಾಕ್ ಪಂಚಾಶತ್ ಸಹಸ್ರೈರ್ ವ್ಯವಹಿತಮಮಿತಂ**
**ಯೋಜನೈಃ ಪರ್ವತಂ ತ್ವಂ**
**ಯಾವತ್ ಸಂಜೀವನಾದ್ಯೌ-ಷಧನಿಧಿ-ಮಧಿಕ-ಪ್ರಾಣ**
**ಲಂಕಾಮನ್ವೈಷೀಃ ।**

---

ರಿಂದ ಹನುಮಾನ್ ಅಥವಾ ಹನೂಮಾನ್ ಎಂಬ ಹೆಸರು ಬಂದಿದೆ. ಹೀಗೆ ನೀವು ಮಹಾ ದೊಡ್ಡ ಜ್ಞಾನಿಗಳೂ ಜ್ಞಾನಮಾತ್ರವಲ್ಲ, ನೀವು ಎದುರಿಲ್ಲದ ಪರಾಕ್ರಮಶಾಲಿಗಳೂ ಆಗಿದ್ದೀರಿ. ಜೊತೆಗೆ ನೈಷ್ಠಿಕ ಬ್ರಹ್ಮಚರ್ಯದಲ್ಲಿದ್ದರೂ ಸಕಲ ವೈಷ್ಣವ ಧರ್ಮಗಳನ್ನೂ ಕಿಂಚಿತ್ತೂ ಕೊರತೆಯಿಲ್ಲದೆ ಪರಿಪಾಲಿಸುತ್ತೀರಿ. ನಿಮ್ಮಲ್ಲಿ ಯಾರು ಭಕ್ತಿಮಾಡುತ್ತಾರೋ ಅವರ ಸಕಲ ದುರಿತಗಳನ್ನೂ ಅನಿಷ್ಟ ಆಪತ್ತುಗಳನ್ನೂ ಆಯಾಕ್ಷಣದಲ್ಲೇ ದಹಿಸಿಹಾಕುತ್ತೀರಲ್ಲದೆ ಭಕ್ತರ ಅಜ್ಞಾನ, ಮಿಥ್ಯಾಜ್ಞಾನ, ಭ್ರಾಂತಿಗಳೆಲ್ಲವನ್ನೂ ದೂರಮಾಡುತ್ತೀರಿ. ನಿಮಗೆ ಶ್ರೀರಾಮ ಚಂದ್ರ ದೇವರಲ್ಲಿ ಎಲ್ಲರಿಗಿಂತಲೂ ಹೆಚ್ಚಾದ ಅಪಾರ ಭಕ್ತಿಯಿದ್ದರೂ ಕೂಡ ಅದು ಇನ್ನೂ ದಿನೇ ದಿನೇ ಅಭಿವೃದ್ಧಿಯಾಗಲೆಂದು ಬಯಸುತ್ತಾ ಇವತ್ತಿನ ವರೆಗೂ ಈ ಭೂಮಂಡಲದಲ್ಲೇ ಕಿಂಪುರುಷಖಂಡದಲ್ಲಿ ವಿರಾಜಮಾನರಾಗಿದ್ದೀರಿ. ಇಂಥಾ ಹನುಮಂತ ದೇವರನ್ನು ನಾನು ನಿಷ್ಠೆಯಿಂದಲೂ ಭಕ್ತಿಯಿಂದಲೂ ಸ್ತುತಿಸಿ ವಂದಿಸುತ್ತೇನೆ.

**ಶ್ಲೋಕ ೧೮—**(ಪ್ರಾಕ್ ಪಂಚಾಶತ್) ಈ ಶ್ಲೋಕದಲ್ಲಿ ಹನುಮಂತ ದೇವರು ಸಂಜೀವನ ಪರ್ವತವನ್ನು ಕಿತ್ತುತಂದ ಪರಾಕ್ರಮವನ್ನು ವರ್ಣಿಸು ತ್ತಾರೆ.

**ಪ್ರಧಾನವಾಕ್ಯ—**ಅಧಿಕಪ್ರಾಣ ! ಪ್ರಾಕ್ ತ್ವಂ ಯಾವತ್ ಪರ್ವತಂ ಲಂಕಾಂ ಅನ್ವೈಷೀಃ, ತದಾ ಲೋಕಃ ತ್ವಾಂ ಏಕಕ್ಷಣೇ ಅದ್ರಾಕ್ಷೀತ್—ಹೇ ಹನುಮಂತ, ಹಿಂದೆ ನೀವು ಯಾವಾಗ ಸಂಜೀವನ ಪರ್ವತವನ್ನು (ಕಿತ್ತು) ಲಂಕೆಗೆ ತಂದಿರೋ ಆಗ ಜನಗಳು ನೀವು (ಇಷ್ಟು ಕಾರ್ಯಗಳನ್ನೂ) ಒಂದೇ ಕ್ಷಣದಲ್ಲಿ ಮಾಡಿದ್ದನ್ನು ನೋಡಿದರು.

**ಅನ್ವಯಾರ್ಥ—ಅಧಿಕಪ್ರಾಣ**–ಮಹಾ ಬಲಶಾಲಿಯಾದ ಹೇ ಹನುಮಂತ, **ಪ್ರಾಕ್**–ಹಿಂದೆ, **ತ್ವಂ**–ನೀವು, ೧) **ಪಂಚಾಶತಸಹಸ್ರೈಃ**

**ಅದ್ರಾಕ್ಷೀ-ದುತ್ಪತಂತಂ ತತ ಉತ ಗಿರಿಮುತ್-ಪಾಟಯಂತಂ ಗೃಹೀತ್ವಾ**
**ಽಽಯಾಂತಂ ಖೇ ರಾಘವಾಂಘ್ರೌ ಪ್ರಣತಮಪಿ ತದ್ಯೈ-**
**ಕಕ್ಷಣೇ ತ್ವಾಂಹಿ ಲೋಕಃ || ೧೮ ||**

---

**ಯೋಜನ್ಯೈಃ**–ಐವತ್ತುಸಾವಿರ ಯೋಜನದ, **ವ್ಯವಹಿತಂ**–ದೂರದಲ್ಲಿದ್ದ, ೨) **ಅಮಿತಂ**–ಯಾರಿಗೂ ತಿಳಿಯದೇ ಇದ್ದ ಅಥವಾ ಬಹಳ ದೊಡ್ಡದಾಗಿದ್ದ, ೩) **ಸಂಜೀವನ-ಆದಿ-ಔಷಧ-ನಿಧಿಂ**–ಸಂಜೀವಿನಿಯೇ ಮೊದಲಾದ ಮೂಲಿಕೆಗಳಿಗೆ ಆಶ್ರಯವಾಗಿದ್ದ, **ಪರ್ವತಂ**–ಗಂಧಮಾದನ ಬೆಟ್ಟವನ್ನು **ಲಂಕಾಂ**–ಲಂಕಾ ಪಟ್ಟಣಕ್ಕೆ, **ಅನೈಷೀಃ**–ಹೊತ್ತು ತಂದಿರೋ, **ತದಾ**–ಆಗ, **ಲೋಕಃ**–ಜನಗಳು, **ತ್ವಾಂ**–ನಿಮ್ಮನ್ನು, **ಏಕಕ್ಷಣೇಹಿ**–ಒಂದು ಕ್ಷಣದೊಳಗಾಗಿಯೇ, (ಅ) **ತತಃ**–ಅಲ್ಲಿಂದ ಎಂದರೆ ಲಂಕೆಯಿಂದ, **ಉತ್ಪತಂತಂ**–ಹಾರಿಹೋದದನ್ನೂ, (ಆ) **ಉತ**–ಮತ್ತು, **ಗಿರಿಂ**–ಆ ಬೆಟ್ಟವನ್ನು, **ಉತ್ಪಾಟಯಂತಂ** ಕಿತ್ತುಕೊಂಡದ್ದನ್ನೂ, (ಇ) **ಗೃಹೀತ್ವಾ**–ಆ ಬೆಟ್ಟವನ್ನು ಹೊತ್ತುಕೊಂಡು, **ಖೇ**–ಆಕಾಶದಲ್ಲಿ, **ಆಯಾಂತಂ**–ಬರುತ್ತಿದ್ದುದನ್ನೂ, (ಈ) **ರಾಘವಾಂಘ್ರೌ**–ರಾಘವ-ಶ್ರೀರಾಮನ, **ಅಂಘ್ರೌ**–ಚರಣದಲ್ಲಿ, **ಪ್ರಣತಂ ಅಪಿ**–ನಮಸ್ಕಾರ ಮಾಡಿದ್ದನ್ನು ಕೂಡ, **ಅದ್ರಾಕ್ಷೀತ್**–ಕಂಡರು.

**ತಾತ್ಪರ್ಯ**—ಹೇ ಹನುಮಂತ, ಹಿಂದೆ ಇಂದ್ರಜಿತ್ ಕಪಿಸೈನ್ಯದ ಮೇಲೆ ಮೋಹನಾಸ್ತ್ರವನ್ನು ಪ್ರಯೋಗಿಸಿ ಬಿಡಲು ಅದರ ಶಕ್ತಿಗೆ ಒಳಗಾಗಿ ಸುಗ್ರೀವಾದಿ ಕಪಿವೀರರೆಲ್ಲರೂ ಮೋಹಿತರಾಗಿ ಸತ್ತಂತೆ ಮಲಗಿಬಿಟ್ಟಿದ್ದರು. ಆ ಸಂದರ್ಭದಲ್ಲಿ ನೀವು ಗಂಧಮಾದನಪರ್ವತವನ್ನು ಲಂಕಾಪಟ್ಟಣಕ್ಕೇ ತಂದು ಬಿಟ್ಟಿರಲ್ಲ–ಅದೆಂಥಹ ಅದ್ಭುತ ಪರಾಕ್ರಮ.; ಏಕೆಂದರೆ ಆ ಪರ್ವತ ಲಂಕಾ ಪಟ್ಟಣದಿಂದ ಅರ್ಧಲಕ್ಷ ಯೋಜನ ದೂರದಲ್ಲಿತ್ತು. ಲಂಕಾಪಟ್ಟಣದಿಂದ ಅಲ್ಲಿಗೆ ಹಾರಿಹೋಗಿ ಆ ಬೆಟ್ಟವನ್ನು ಕಿತ್ತು ಕೈಯಲ್ಲಿ ಎತ್ತಿಕೊಂಡು ಪುನಃ ಲಂಕಾಪಟ್ಟಣಕ್ಕೇ ಅದನ್ನು (ಬೆಟ್ಟವನ್ನು) ತಂದು ಶ್ರೀರಾಮಚಂದ್ರದೇವರ ಮುಂದಿಟ್ಟಿರಲ್ಲವೆ. ಈ ಕಾರ್ಯ ಬೇರೆ ಯಾರಿಂದ ಮಾಡಲು ಸಾಧ್ಯವಿದೆ? ಅದಕ್ಕೂ ಮಿಗಿಲಾಗಿ ಇದಿಷ್ಟು ಕಾರ್ಯವನ್ನೂ-ಲಂಕೆಯಿಂದ ಅಲ್ಲಿಗೆ ಹೋದದ್ದು, ಬೆಟ್ಟವನ್ನು ಎಬ್ಬಿದ್ದು, ಅದನ್ನು ಹೊತ್ತುಕೊಂಡೇ ಲಂಕೆಗೆ

**ಕ್ಷಿಪ್ತಃ ಪಶ್ಚಾತ್ ಸಲೀಲಂ ಶತಮತುಲಮತೇ ಯೋಜನಾನಾಂ ಸ ಉಚ್ಚ-ಸ್ತಾವದ್-ವಿಸ್ತಾರವಾಂಶ್ಚಾ-ಪ್ಯು-ಪಲ-ಲವ ಇವ ವ್ಯಗ್ರಬುದ್ಧ್ಯಾ ತ್ವಯಾತಃ ।**

---

ಬಂದದ್ದು, ಅದನ್ನು ರಾಮನ ಮುಂದಿಟ್ಟದ್ದು ಎಲ್ಲವನ್ನೂ ಕೇವಲ ಒಂದೇ ಒಂದು ಕ್ಷಣದಲ್ಲಿ ಮಾಡಿಬಿಟ್ಟಿರಲ್ಲ! ನಿಮ್ಮ ಕೈಚಳಕವನ್ನು ಎಷ್ಟೆಂದು ವರ್ಣಿಸೋಣ ?

**ಶ್ಲೋಕ ೧೯**—(ಕ್ಷಿಪ್ತಃ) ಕಿತ್ತು ತಂದಿದ್ದ ಆ ಪರ್ವತವನ್ನು ಲಂಕೆ ಯಿಂದಲೇ ಹಿಂದಕ್ಕೆ ಎಸೆದುಬಿಟ್ಟಿರೆಂದು ಹೇಳುತ್ತಾರೆ.

**ಪ್ರಧಾನವಾಕ್ಯ**—ಪಶ್ಚಾತ್ ಸಃ ತ್ವಯಾ ಕ್ಷಿಪ್ತಃ ಪ್ರಾಗಿವ ಅಭೂತ್ । ತೇ ಕೌಶಲಾಯ ನಮಃ = ಆಮೇಲೆ ಅದು (ಪರ್ವತವು) ನಿಮ್ಮಿಂದ ಹಿಂದಕ್ಕೆ ಎಸೆಯಲ್ಪಟ್ಟು ಹಿಂದಿದ್ದಂತೆಯೇ ಕೂಡಿಕೊಂಡಿತು. ನಿಮ್ಮ ಕೌಶಲ್ಯಕ್ಕೆ ನಮಸ್ಕಾರ.

**ಅನ್ವಯಾರ್ಥ**—**ಅತುಲಮತೇ**-ಅಸದೃಶವಾದ ಬುದ್ಧಿಯುಳ್ಳ ಹೇ ಹನುಮಂತ ದೇವರೇ, **ಪಶ್ಚಾತ್**-ಅನಂತರ (ಕೆಲಸ ಮುಗಿದನಂತರ), **ಯೋಜನಾನಾಂ ಶತಂ**-ನೂರು ಯೋಜನ, **ಉಚ್ಚಃ**-ಎತ್ತರವಾಗಿದ್ದ, **ತಾವತ್**-ಅಷ್ಟೇ (ಎಂದರೆ ನೂರು ಯೋಜನವೇ), **ವಿಸ್ತಾರವಾನ್ ಚ ಅಪಿ**-ವಿಸ್ತೀರ್ಣವುಳ್ಳದ್ದಾಗಿದ್ದರೂ ಕೂಡ, **ಸಃ**-ಆ ಗಂಧಮಾದನ ಪರ್ವತವು, **ತ್ವಯಾ**-ನಿಮ್ಮಿಂದ, **ವ್ಯಗ್ರಬುದ್ಧ್ಯಾ**-ಅಲಕ್ಷ್ಯಬುದ್ಧಿಯಿಂದ, **ಅತಃ**-ಇಲ್ಲಿಂದಲೇ (ಲಂಕೆಯಿಂದಲೇ), **ಉಪಲಲವಃ ಇವ**-ಸಣ್ಣ ಕಲ್ಲುಚೂರನ್ನು ಎಸೆಯುವಂತೆ, **ಸಲೀಲಂ**-ಅನಾಯಾಸವಾಗಿ, **ಕ್ಷಿಪ್ತಃ**-ಎಸೆಯಲ್ಪಟ್ಟದ್ದಾಗಿ, ಸ್ವಸ್ವ....ಛೇದಾಂತಃ—**ಸ್ವಸ್ವ**-ತನ್ನ ತನ್ನ, **ಸ್ಥಾನ**-ಸ್ಥಳದಲ್ಲಿ, **ಸ್ಥಿತ**-ಇರುವುದರಿಂದ, **ಅತಿಸ್ಥಿರ**-ಬಹಳ ಗಟ್ಟಿಯಾಗಿ ಜೋಡಿಕೊಂಡು, **ಶಕಲ**-ಸಣ್ಣ ಕಲ್ಲು, **ಶಿಲಾ**-ದೊಡ್ಡ ಬಂಡೆಗಳು ಇವುಗಳ, **ಜಾಲ**-ಸಮೂಹಗಳು, **ಸಂಶ್ಲೇಷ**-ಹೊಂದಿಕೊಂಡದ್ದರಿಂದ, **ನಷ್ಟಚ್ಛೇದಾಂಕಃ**-ಕಿತ್ತ ಗುರುತೇ ಇಲ್ಲದಂತಾಗಿ,

**ಸ್ವಸ್ವ-ಸ್ಥಾನ-ಸ್ಥಿತಾತಿ-ಸ್ಥಿರ-ಶಕಲ-ಶಿಲಾ-ಜಾಲ-ಸಂಶ್ಲೇಷ-ನಷ್ಟ-**
**ಚ್ಛೇದಾಂಕಃ ಪ್ರಾಗಿವಾಭೂತ್ ಕಪಿವರವಪುಷ-ಸ್ತೇ ನಮಃ**
**ಕೌಶಲಾಯ ॥ ೧೯ ॥**

---

**ಪ್ರಾಗ್ ಇವ**-ಹಿಂದಿದ್ದಂತೆಯೇ, **ಅಭೂತ್**–ಆಗಿಹೋಯಿತು. **ಕಪಿವರ-ವಪುಷಃ**–ಕೋತಿಯ ರೂಪವನ್ನು ಧರಿಸಿದ, **ತೇ**–ನಿಮ್ಮ, **ಕೌಶಲಾಯ**–ಕೌಶಲ್ಯಕ್ಕೆ, **ನಮಃ**–ನಮಸ್ಕಾರ.

**ತಾತ್ಪರ್ಯ**—ಅಸದೃಶ ಬುದ್ಧಿಯುಳ್ಳ ಹೇ ಹನುಮಂತದೇವರೇ, ನೀವು ಹೊತ್ತು ತಂದಿದ್ದ ಆ ಗಂಧಮಾದನ ಪರ್ವತ ನೂರು ಯೋಜನ ಎತ್ತರವಾಗಿದ್ದು ಅಷ್ಟೇ ವಿಸ್ತೀರ್ಣವುಳ್ಳದ್ದಾಗಿತ್ತು. ಆದರೂ ಕೂಡ ಅದರ ಕೆಲಸ ಮುಗಿದನಂತರ ಅಷ್ಟು ದೊಡ್ಡ ಪರ್ವತವನ್ನೇ ಒಂದು ಸಣ್ಣ ಕಲ್ಲುಚೂರನ್ನು ಎಸೆಯುವಂತೆ, ಲಂಕಾಪಟ್ಟಣದಿಂದಲೇ ಅದಿದ್ದ ಸ್ಥಳಕ್ಕೆ ಎಸೆದುಬಿಡಲು ಅದು ಹಿಂದಿದ್ದ ಸ್ಥಳದಲ್ಲೇ ಸರಿಯಾಗಿ ಕೂತುಕೊಂಡಿತಲ್ಲದೆ, ಒಂದು ಕಲ್ಲಾಗಲಿ ಒಂದು ಬಂಡೆಯಾಲಿ ಅತ್ತ ಇತ್ತ ಅಲುಗಾಡದೆ ಕುಳಿತುಕೊಂಡಿದ್ದರಿಂದ ಕಿತ್ತ ಗುರುತೇ ಇಲ್ಲದಂತೆ ಹೊಂದಿಕೊಂಡುಬಿಟ್ಟಿತು. ಹೇ ವಾನರೋತ್ತಮ, ನಿಮ್ಮ ಆ ಕಾರ್ಯಕೌಶಲತೆಗೆ ತಲೆಬಾಗಿ ನಮಿಸುತ್ತೇನೆ.

**ಶ್ಲೋಕ ೨೦**—(ದೃಷ್ಟ್ವಾ) ಈ ಶ್ಲೋಕದಲ್ಲಿ ಹನುಮಂತದೇವರು ರಾವಣನಿಗೆ ಮುಷ್ಟಿಪ್ರಹಾರ ಮಾಡಿದ ಮಹಿಮೆಯನ್ನು ವರ್ಣಿಸುತ್ತಾರೆ.

**ಪ್ರಧಾನವಾಕ್ಯ**—ಯೇನ ನಿಷ್ಪಿಷ್ಟಂ ದುಷ್ಟಾಧಿಪೋರಃ ದೃಷ್ಟ್ವಾ, ಜನಃ ತಟಾಕಾತಿಶಂಕಃ ಅಭೂತ್, ಸಃ ತೇ ಮುಷ್ಟಿಃ ಮೇ ಇಷ್ಟಂ ಪ್ರದೇಷ್ಟುಂ ನೇಷ್ಟೇ ಕಿಮ್=ಯಾವ ಮುಷ್ಟಿಯಿಂದ ಚೂರು ಚೂರು ಮಾಡಲ್ಪಟ್ಟ ರಾವಣನ ಎದೆಯನ್ನು ನೋಡಿ ಜನಗಳು ಅದನ್ನು ಕೆರೆಯೆಂದೇ ಸಂದೇಹಪಟ್ಟರೋ ಆ ನಿನ್ನ ಮುಷ್ಟಿಯು ನನ್ನ ಇಷ್ಟಾರ್ಥವನ್ನು ಸಲ್ಲಿಸಲಾರದೆ ಹೋದೀತೆ ?

**ಅನ್ವಯಾರ್ಥ**—(ಹನೂಮಾನ್-ಎಲೈ ಹನುಮಂತ ದೇವರೇ !) **ಯೇನ**-ಯಾವ ಮುಷ್ಟಿಯಿಂದ, **ನಿಷ್ಪಿಷ್ಟಂ**–ಪುಡಿಪುಡಿ ಮಾಡಲ್ಪಟ್ಟ,

**ದೃಷ್ಟ್ವಾ ದುಷ್ಟಾಧಿಪೋರಃ ಸ್ಫುಟಿತ-ಕನಕ-ಸದ್-ವರ್ಮ**
**ಘೃಷ್ಟಾಸ್ಥಿಕೂಟಂ**
**ನಿಷ್ಪಿಷ್ಟಂ ಹಾಟಕಾದ್ರಿ-ಪ್ರಕಟತಟತಟಾ-ಕಾತಿಶಂಕೋ**
**ಜನೋಽಭೂತ್ ।**

---

ಸ್ಫುಟಿಕ....ವರ್ಮ—**ಸ್ಫುಟಿತ**-ಜಜ್ಜಲ್ಪಟ್ಟ, **ಕನಕ**-ಬಂಗಾರದ, **ಸತ್**-ಉತ್ತಮವಾದ, **ವರ್ಮ**-ಕವಚವುಳ್ಳ, ಘೃಷ್ಟಾ....ಕೂಟಂ—**ಘೃಷ್ಟ**-ಪುಡಿ ಮಾಡಲ್ಪಟ್ಟ, **ಅಸ್ಥಿ**-ಮೂಳೆಯ, **ಕೂಟಂ**-ಸಮೂಹವುಳ್ಳ, ದುಷ್ಟಾಧಿ-ಪೋರಃ—**ದುಷ್ಟ**-ದುರ್ಜನರಲ್ಲಿ, **ಅಧಿಪ**-ಮುಖಂಡನಾದ ರಾವಣನ, **ಉರಃ**-ಎದೆಯನ್ನು, **ದೃಷ್ಟ್ವಾ**-ನೋಡಿ, **ಜನಃ**-ಜನಗಳು, ಹಾಟಕಾ....ಶಂಕಃ—**ಹಾಟಕ**-ಬಂಗಾರದ, **ಅದ್ರಿ**-ಬೆಟ್ಟವಾದ ಮೇರುಪರ್ವತದಲ್ಲಿ, **ಪ್ರಕಟ**-ಕಾಣಿಸುವ, **ತಟಾಕ**-ಕೆರೆಯೆಂದೇ, **ಅತಿಶಂಕಃ**-ದೃಢವಾದ ಭ್ರಾಂತಿಯುಳ್ಳವರಾಗಿ, **ಅಭೂತ್**-ಆದರೋ, **ಸಃ**-ಅಂಥಾ, **ಆಜೌ**-ಯುದ್ಧದಲ್ಲಿ, ರಾವಣಾದಿ....ಪಟುಃ—**ರಾವಣ**-ರಾವಣನ, **ಅರಿ**-ಶತ್ರುವಾದ ಶ್ರೀರಾಮದೇವರಿಗೆ, **ಪ್ರಿಯ**-ಇಷ್ಟವಾದ ಕಾರ್ಯಗಳನ್ನು, **ನಟನ**-ಮಾಡುವುದರಲ್ಲಿ, **ಪಟುಃ**-ಸಮರ್ಥವಾದ, ಅಷ್ಟಾಪದ....ಕಾಷ್ಠಃ—**ಅಷ್ಟಾಪದ**-ಚಿನ್ನದ, **ಕಟಕ**-ಕೈಗಡಗದ, **ತಟಿತ್-ಕೋಟಿ**-ಕೋಟಿ ಮಿಂಚುಗಳಂತೆ, **ಭಾ**-ಕಾಂತಿಯಿಂದ, **ಆಮೃಷ್ಟ**-ಆವರಿಸಲ್ಪಟ್ಟ, **ಕಾಷ್ಠಃ**-ದಿಕ್ಕುಗಳುಳ್ಳ, **ತೇ**-ನಿಮ್ಮ, **ಮುಷ್ಟಿಃ**-ಹಿಡಿಯು, **ಮೇ**-ನನ್ನ, **ಇಷ್ಟಂ**-ಇಷ್ಟಾರ್ಥವನ್ನು, **ಪ್ರದೇಷ್ಟುಂ**-ಕೊಡುವುದಕ್ಕೆ, **ನ ಈಷ್ಟೇ ಕಿಂ**-ಸಮರ್ಥವಾಗಿಲ್ಲವೇನು ?

**ತಾತ್ಪರ್ಯ**—ಎಲೈ ಆಂಜನೇಯ ಸ್ವಾಮಿಯೇ, ನೀವು ಲಂಕಾಪಟ್ಟಣದಲ್ಲಿ ನಡೆದ ರಾಮ-ರಾವಣರ ಯುದ್ಧದಲ್ಲಿ ಶ್ರೀರಾಮಚಂದ್ರದೇವರಿಗೆ ಪ್ರಿಯವಾದ ಎಷ್ಟೋ ಅಸಂಖ್ಯ ಕಾರ್ಯಗಳನ್ನು ನಿಮ್ಮ ಕೈಯಿಂದಲೇ ಮಾಡಿದ್ದೀರಿ. ಅವುಗಳಲ್ಲಿ ಒಂದು ಮುಖ್ಯವಾದ ಕಾರ್ಯವೆಂದರೆ ರಾವಣನ ಎದೆಗೆ ಮುಷ್ಟಿ ಪ್ರಹಾರ ಮಾಡಿದ್ದು. ಏಕೆಂದರೆ ಆ ರಾವಣ ದೊಡ್ಡ ಆಳು, ಅವನ ಎದೆಯೂ ತುಂಬಾ ವಿಶಾಲವಾಗಿತ್ತು. ಆ ಎದೆಯಮೇಲೆ ಬಂಗಾರದ ಕವಚವನ್ನು ಧರಿಸಿಕೊಂಡಿದ್ದ. ನೀವು ಅವನ ಎದೆಯಮೇಲೆ ಮುಷ್ಟಿಪ್ರಹಾರ ಮಾಡಿದಾಗ

**ಯೇನಾಜೌ ರಾವಣಾರಿ-ಪ್ರಿಯನಟನಪಟುರ್-ಮುಷ್ಟಿರಿಷ್ಟಂ ಪ್ರದೇಷ್ಟುಂ**
**ಕಿಂ ನೇಷ್ಟೇ ಮೇ ಸ ತೇಽಷ್ಟಾ -ಪದಕಟಕ-ತಟಿತ್-ಕೋಟಿಭಾಮೃಷ್ಟಕಾಷ್ಠಃ ॥ ೨೦ ॥**

---

ಅವನ ಎದೆಯ ಗೂಡಿನ ಮೂಳೆಗಳೆಲ್ಲಾ ಪುಡಿಪುಡಿಯಾಗಿ ಹೋದುವಲ್ಲದೆ ಮೇಲೆ ಧರಿಸಿದ್ದ ಚಿನ್ನದ ಕವಚವೂ ಜಜ್ಜಿಗುಟ್ಟಿಹೋಯಿತು. ಒಳಗಿಂದ ರಕ್ತ ಚಿಮ್ಮಿಬರಹತ್ತಿತು. ಆ ದೃಶ್ಯವನ್ನು ಕಂಡ ಜನಗಳಿಗೆ ಅದು ಮೇರುಪರ್ವತದ ಮೇಲೆ ಹೊಸದಾಗಿ ನಿರ್ಮಿತವಾದ ಕೆಂಪುನೀರಿನ ಕೆರೆಯೇ ಇರಬೇಕು ಎಂಬ ಭ್ರಮೆ ಬರುತ್ತಿತ್ತು. ಅಂಥಾ ಬಲವಾದ ಪೆಟ್ಟು ಕೊಟ್ಟಂಥಾ ನಿಮ್ಮ ಹಸ್ತ ಗಳಲ್ಲಿ ನೀವು ಧರಿಸಿರುವ ಚಿನ್ನದ ಕಡಗಗಳ ಕಾಂತಿಯು ಮಿಂಚುಗಳಂತೆ ಸುತ್ತ ಮುತ್ತ ಎಲ್ಲ ದಿಕ್ಕುಗಳನ್ನೂ ಬೆಳಗಿಸುತ್ತವೆ. ಇಂಥಾ ನಿಮ್ಮ ಹಸ್ತವು ನನ್ನ ಇಷ್ಟಾರ್ಥಗಳನ್ನು ಈಡೇರಿಸಿಕೊಡುವಲ್ಲಿ ಏನು ಸಂದೇಹವಿದೆ !

**ಶ್ಲೋಕ ೨೧**—(ದೇವ್ಯಾದೇಶ) ಈ ಶ್ಲೋಕದಲ್ಲಿ ರಾಮದೇವರು ಆಂಜನೇಯನಿಗೆ ಬಹ್ಮಪದವಿಯನ್ನು ಅನುಗ್ರಹಿಸಿದ ವಿಚಾರವನ್ನು ಹೇಳಿ ಹನುಮದವತಾರದ ನಿರೂಪಣೆಯನ್ನು ಸಮಾಪ್ತಿ ಮಾಡುತ್ತಾರೆ.

**ಪ್ರಧಾನವಾಕ್ಯ**—ರಾಮನಾಮಾ ಮುಕುಂದಃ ತ್ವಾ ಪಾರಮೇಷ್ಠ್ಯೇ ಸಹಭುಜಂ ಅಕರೋತ್—ಶ್ರೀರಾಮದೇವರು ನಿಮಗೆ ಬ್ರಹ್ಮಪದವಿಯನ್ನು ಅನುಗ್ರಹಿಸಿ ಸಹಭೋಗವನ್ನು ಕೃಪೆ ಮಾಡಿದರು.

**ಅನ್ವಯಾರ್ಥ**—(ಹನುಮನ್-ಎಲೈ ಆಂಜನೇಯನೇ) ದೇವ್ಯಾ.... ದಯಾರ್ದ್ರಃ—**ದೇವೀ**-ಸೀತಾದೇವಿಗೆ, **ಆದೇಶ**-ರಾಮದೇವರ ಸಂದೇಶವನ್ನು, **ಪ್ರಣೇತಿ**-ತೆಗೆದುಕೊಂಡುಹೋದದ್ದು ಮತ್ತು (ಪುನಃ), **ದೇವೀ**-ಸೀತಾ ದೇವಿಯ, **ಆದೇಶ**-ಸಂದೇಶವನ್ನು, **ಪ್ರಣೀತಿ**-ರಾಮದೇವರಿಗೆ ಮುಟ್ಟಿಸಿದ್ದು, **ದ್ರುಹಿಣ**-ಬ್ರಹ್ಮದೇವರ ಮತ್ತು **ಹರ**-ರುದ್ರದೇವರ, **ವರ**-ವರಗಳಿಂದ, **ಅವಧ್ಯ**-ಅವಧ್ಯರಾಗಿದ್ದ, **ರಕ್ಷಃ**-ರಾಕ್ಷಸರನ್ನು, **ವಿಘಾತ**-ಸಂಹಾರಮಾಡಿದ್ದೇ, **ಆದಿ**-ಮೊದಲಾದ, **ಆಸೇವಾ**-ವಿಶೇಷ ಸೇವೆಗಳಿಂದ, **ಉದ್ಯತ್**-ಉಂಟಾದ,

**ದೇವ್ಯಾದೇಶಪ್ರಣೀತಿ-ದ್ರುಹಿಣ-ಹರವರಾ-ವಧ್ಯರಕ್ಷೋವಿಘಾತಾ-**
**ದ್ಯಾಸೇವೋದ್ಯದ್ದಯಾರ್ದ್ರಃ ಸಹಭುಜಮಕರೋದ್**
**ರಾಮನಾಮಾ ಮುಕುಂದಃ ।**

---

**ದಯಾ**–ಕೃಪೆಯಿಂದ, **ಆರ್ದ್ರಃ**–ಪ್ರಸನ್ನನಾದ, **ರಾಮನಾಮಾ**–ಶ್ರೀರಾಮ ಚಂದ್ರದೇವರೆಂದು ಹೆಸರುಳ್ಳ, **ಮುಕುಂದಃ**–ವಿಷ್ಣುವು, **ಅತುಲಂ**–ಎದುರಿಲ್ಲದ (ಅಸದೃಶವಾದ), **ಕರತಲಂ**–ಅಂಗೈಯನ್ನು, **ಮೂರ್ಧ್ನಿ**–ನಿಮ್ಮ ತಲೆಯ ಮೇಲೆ, **ವಿನ್ಯಸ್ಯ**–ಇಟ್ಟು **ದುಷ್ಪ್ರಾಪೇ**–ಬೇರೆಯುವರಿಗೆ ದೊರಕಲು ಅಸಾಧ್ಯ ವಾದ, **ಪಾರಮೇಷ್ಠ್ಯೇ**–ಬ್ರಹ್ಮಪದವಿಯಲ್ಲಿ, **ಧನ್ಯಂ**–ಧನ್ಯನನ್ನಾಗಿ, **ತನ್ವನ್**–ಮಾಡುತ್ತಾ, ಪ್ರಭೂತ....ಕ್ಷಣಃ—**ಪ್ರಭೂತ**–ಬಹಳ ಅಧಿಕವಾದ, **ಪ್ರಣಯ**–ಪ್ರೀತಿಯಿಂದ, **ವಿಕಸಿತ**–ಅರಳಿದ, **ಅಬ್ಜ**–ಕಮಲದಂತೆ, **ಈಕ್ಷಣಃ**–ಕಣ್ಣುಳ್ಳವನಾಗಿ, **ಭೂಯಃ**–ಮತ್ತೆ ಮತ್ತೆ, **ಈಕ್ಷಮಾಣಃ**–ನೋಡುತ್ತಾ, **ತ್ವಾ**–ನಿಮ್ಮನ್ನು, **ಸಹಭುಜಂ**–ಸಹಭೋಗವನ್ನು, **ಅಕರೋತ್**–ಮಾಡಿದರು.

**ತಾತ್ಪರ್ಯ**—ಹೇ ವಾಯುಕುಮಾರರೇ, ನೀವು ರಾಮಚಂದ್ರದೇವರ ಆದೇಶವನ್ನು ಸೀತಾಮ್ಮನವರಿಗೆ ಮುಟ್ಟಿಸಿ ಅವರ ಸಂದೇಶವನ್ನು ರಾಮ ದೇವರಿಗೆ ತಂದೊಪ್ಪಿಸಿದಿರಿ. ಬ್ರಹ್ಮದೇವರ ವರಗಳಿಂದಲೂ ರುದ್ರದೇವರ ವರಗಳಿಂದಲೂ ಸಾವೇ ಇಲ್ಲದಿದ್ದ ಅಸಂಖ್ಯಮಂದಿ ರಾಕ್ಷಸರನ್ನು ನಾಶಮಾಡಿ ಬಿಟ್ಟಿರಿ. ಹೀಗೆ ಅನೇಕಾನೇಕ ವಿಧವಾದ ನಿಮ್ಮ ಸೇವೆಯನ್ನು ಕಂಡು ಶ್ರೀರಾಮದೇವರು ಕರುಣಾರಸದಿಂದ ನೆನೆದುಹೋಗಿ ನಿಮ್ಮನ್ನು ಅರಳಿದ ನೇತ್ರ ಕಮಲಗಳಿಂದ ಮತ್ತೆ ಮತ್ತೆ ನೋಡುತ್ತಾ, ನಿಮ್ಮ ತಲೆಯಮೇಲೆ ತಮ್ಮ ಅಮೋಘವಾದ ಅಂಗೈಯನ್ನಿಟ್ಟು ನಿಮ್ಮನ್ನು ಧನ್ಯರನ್ನಾಗಿ ಮಾಡಿದರು. ಅಷ್ಟಕ್ಕೇ ಸಾಲದೆ, ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಅನುಗ್ರಹಿಸಿ, ಸಹಭೋಗವೆಂಬ ರುದ್ರಾದಿಗಳಿಗೂ ದುರ್ಲಭವಾದ (ಆ ಕಲ್ಪದ ಉದ್ದಕ್ಕೂ ನಿಮ್ಮೊಡನೆಯೇ ತಾನೂ ಸಕಲ ಭೋಗಗಳನ್ನೂ ಒಟ್ಟಿಗೆ ಅನುಭವಿಸುವುದೆಂಬ) ಯೋಗವನ್ನೂ ನಿಮಗೆ ಅನುಗ್ರಹ ಮಾಡಿದರು. ಹೇ ಸ್ವಾಮಿ ಹನುಮಂತ ದೇವರೇ ನಿಮ್ಮ ಚರಿತ್ರೆಯು ಈ ಪ್ರಕಾರ ಅತ್ಯಪೂರ್ವವಾದ ಮಹಿಮೆ ಉಳ್ಳದ್ದು. ಇಲ್ಲಿಗೆ ಹನುಮದವತಾದ ನಿರೂಪಣೆ ಮುಗಿಯಿತು.

**ದುಷ್ಪ್ರಾಪ್ಯೇ ಪಾರಮೇಷ್ಠ್ಯೇ ಕರತಲಮತುಲಂ ಮೂರ್ಧ್ನಿ**
**ವಿನ್ಯಸ್ಯ ಧನ್ಯಂ**
**ತನ್ವನ್ ಭೂಯಃ ಪ್ರಭೂತ-ಪ್ರಣಯ ವಿಕಸಿತಾ-ಬ್ಜೇಕ್ಷಣ**
**ಸ್ತ್ವೀಕ್ಷಮಾಣಃ || ೨೦ ||**

---

## ಸಮರ್ಪಣೆ

ಅರ್ಥಚ್ಛಲೇನ ಪಾಪಘ್ನಂ ರಾಮದೂತ ಕಥಾಮೃತಮ್ |
ನಿರೂಪಿತಂ ಮಯಾತೇನ ಪ್ರೀಯತಾಂ ಜಾನಕೀಪತಿಃ ||

ಅರ್ಥ :—ಅರ್ಥ ಹೇಳುವ ನೆಪದಿಂದ ಪಾಪನಾಶಕವಾದ ಹನುಮಂತನ ಚರಿತ್ರೆಯನ್ನು ನಿರೂಪಣ ಮಾಡಿದ್ದೇನೆ. ಆದರಿಂದ ಶ್ರೀ ಸೀತಾಪತಿಯಾದ ರಾಮಚಂದ್ರ ಸ್ವಾಮಿಯು ಪ್ರೀತನಾಗಲಿ.

**ಜಘ್ನೇ ನಿಘ್ನೇನ ವಿಘ್ನೋ ಬಹುಲ-ಬಲ-ಬಕ-ಧ್ವಂಸನಾದ್ ಯೇನ ಶೋಚದ್-**
**ವಿಪ್ರಾನುಕ್ರೋಶಪಾಶೈ-ರಸುವಿಧೃತಿಸುಖ-ಸ್ಯೈಕಚಕ್ರಾಜನಾನಾಮ್ ।**

---

## ಭೀಮಾವತಾರ ನಿರೂಪಣೆ (ಶ್ಲೋಕ ೨೨ ರಿಂದ ೨೮)

**ವಾಯುಸ್ತುತೌ ಕ್ರಮಾತ್ ಪ್ರಾಪ್ತಂ ಯಚ್ಚ ರೂಪಂ ದ್ವಿತೀಯಕಮ್ ।**
**ಮಹಿಮಾ ತಸ್ಯ ಭೀಮಸ್ಯ ವರ್ಣ್ಯತೇ ಶ್ಲೋಕ ಸಪ್ತಕೇ ॥**

**ಅರ್ಥ :**—ಹನುಮದವತಾರದ ನಂತರ ವಾಯುಸ್ತುತಿಯಲ್ಲಿ ಕ್ರಮ ಪ್ರಾಪ್ತವಾದ ಎರಡನೇ ಅವತಾರವಾದ ಭೀಮನ ಮಹಿಮೆಯನ್ನು 7 ಶ್ಲೋಕಗಳಲ್ಲಿ ವರ್ಣಿಸುತ್ತಾರೆ.

## ದೈತ್ಯಸಂಹಾರ

**ಶ್ಲೋಕ ೨೨**—(ಜಘ್ನೇ) ಏಳು ಶ್ಲೋಕಗಳಲ್ಲೂ ಮೊದಲ ಮೂರು ಶ್ಲೋಕಗಳಲ್ಲಿ ಭೀಮಸೇನದೇವರು ದುಷ್ಟಸಂಹಾರ ಮಾಡಿ ಭೂಭಾರವನ್ನು ಇಳುಹಿದ ಮಹಿಮೆಯನ್ನು ವರ್ಣಿಸುತ್ತಾರೆ. ಅದರಲ್ಲಿ ಈ ಶ್ಲೋಕದಲ್ಲಿ ಲೋಕಕಂಟಕರಾಗಿದ್ದ ಬಕ ಮತ್ತು ಕಿರ್ಮೀರ ಎಂಬ ಇಬ್ಬರು ಮಹಾದೈತ್ಯರನ್ನು ಸಂಹಾರಮಾಡಿ ಲೋಕಕಲ್ಯಾಣ ಮಾಡಿದ ವಿಚಾರವನ್ನು ಹೇಳುತ್ತಾರೆ.

**ಪ್ರಧಾನವಾಕ್ಯ**—(ಅ) ಯೇನ ಬಕಧ್ವಂಸನಾತ್ ವಿಘ್ನಃ ಜಘ್ನೇ, (ಆ) ಯಃ ಕಿರ್ಮೀರಂ ಚ ನಿರ್ಮಮಾಥ, (ಇ) ತಸ್ಮೈ ಕುರುಕುಲಪತಯೇ ತೇ ಪ್ರಣಾಮಾನ್ ಕುರ್ಮಃ ಎಂದು ಎರಡು ಅಧೀನ ವಾಕ್ಯಗಳೂ ಒಂದು ಪ್ರಧಾನವಾಕ್ಯವೂ ಇವೆ. ಇದಕ್ಕೆ (ಅ) ಯಾರಿಂದ ಬಕಾಸುರನನ್ನು ಧ್ವಂಸ ಮಾಡಿದ್ದರಿಂದ ವಿಘ್ನವು ಪರಿಹಾರಮಾಡಲ್ಪಟ್ಟಿತೋ, (ಆ) ಯಾರು ಕಿರ್ಮೀರನನ್ನೂ ನಾಶಮಾಡಿದರೋ, (ಇ) ಅಂಥಾ ಕುರುಕುಲಾಗ್ರಣಿಯಾದ ಹೇ ಭೀಮಸೇನ ! ನಿನಗೆ ಪ್ರಣಾಮ ಮಾಡುತ್ತೇವೆ ಎಂದು ಅರ್ಥ.

**ಅನ್ವಯಾರ್ಥ**—**ದೇವ**-ಹೇ ಭೀಮಸೇನದೇವರೇ, (ಅ) ವಿಪ್ರಾ.... ಪಾಶೈಃ—ವಿಪ್ರ-ಬ್ರಾಹ್ಮಣನ ಮೇಲಿನ, ಅನುಕ್ರೋಶ-ಸಹಾನುಭೂತಿಯೆಂಬ ಪಾಶೈಃ-ಹಗ್ಗಗಳಿಂದ, **ನಿಘ್ನೇನ**-ಅಧೀನರಾದ, **ಯೇನ**-ಯಾವ ನಿಮ್ಮಿಂದ,

**ತಸ್ಮೈ ತೇ ದೇವ ಕುರ್ಮಃ ಕುರುಕುಲಪತಯೇ ಕರ್ಮಣಾ ಚ ಪ್ರಣಾಮಾನ್**
**ಕಿರ್ಮೀರಂ ದುರ್ಮತೀನಾಂ ಪ್ರಥಮ-ಮಥ ಚ ಯೋ ನರ್ಮಣಾ ನಿರ್ಮಮಾಥ || ೨೨ ||**

---

ಬಹುಲ....ಧ್ವಂಸನಾತ್—ಬಹುಲ-ಬಹಳ, ಬಲ-ಬಲಿಷ್ಠನಾದ, ಬಕ-ಬಕಾಸುರನನ್ನು, **ಧ್ವಂಸನಾತ್**-ಧ್ವಂಸಮಾಡಿದ್ದರಿಂದ, ಏಕ....ಜನಾನಾಂ—**ಏಕಚಕ್ರಾ**-ಏಕಚಕ್ರವೆಂಬ ಊರಿನ, **ಜನಾನಾಂ**-ಜನಗಳಿಗೆ (ಒದಗಿದ್ದ), ಅಸು....ಸುಖಸ್ಯ—**ಅಸು**-ಪ್ರಾಣವನ್ನು ಅಥವಾ ಉಸಿರಾಟವನ್ನು, **ವಿಧೃತಿ**-ನಡೆಸುವುದೆಂಬ, **ಸುಖಸ್ಯ**-ಸುಖಕ್ಕೂ, **ವಿಘ್ನಃ**-ಇದ್ದ ತೊಂದರೆಯು, **ಜಘ್ನೇ**-ಪರಿಹಾರಮಾಡಲ್ಪಟ್ಟಿತೋ, (ಅ) ಅಥ ಚ-ಆಮೇಲೆ, **ಯಃ**-ಯಾವ ನೀವು, **ದುರ್ಮತೀನಾಂ**-ದುರ್ಬುದ್ಧಿಯುಳ್ಳ ನೀಚ ಜನಗಳಲ್ಲಿ, **ಪ್ರಥಮಂ**-ಮೊದಲಿಗನಾದ ಅಥವಾ ಅಗ್ರೇಸರನಾದ, **ಕಿರ್ಮೀರಂ ಚ**-ಕಿರ್ಮೀರ ಎಂಬ ದೈತ್ಯನನ್ನೂ, **ನರ್ಮಣಾ**-ಅನಾಯಾಸವಾಗಿ, **ನಿರ್ಮಮಾಥ**-ಮರ್ದನ ಮಾಡಿದಿರೋ, ತಸ್ಮೈ-ಅಂಥಾ, ಕುರು....ಪತಯೇ—**ಕುರು**-ಕೌರವರ, **ಕುಲ**-ವಂಶದಲ್ಲಿ, **ಪತಯೇ**-ಶ್ರೇಷ್ಠನಾದ, **ತೇ**-ನಿಮಗೆ, **ಕರ್ಮಣಾ**-ತ್ರಿಕರಣ ಪೂರ್ವಕವಾಗಿ, **ಪ್ರಣಾಮಾನ್**-ನಮಸ್ಕಾರಗಳನ್ನು, **ಕುರ್ಮಃ**-ನಾವು ಮಾಡುವೆವು.

**ತಾತ್ಪರ್ಯ**—ಹೇ ಭೀಮಸೇನದೇವರೇ, ಬಕಾಸುರನಿಗೆ ಪ್ರತಿನಿತ್ಯ ಒಬ್ಬನನ್ನು ನರಬಲಿಯಾಗಿ ಕೊಡಬೇಕಾಗಿದ್ದುದರಿಂದ ಏಕಚಕ್ರಾನಗರಿಯ ಜನಗಳು ಸಲೀಸಾಗಿ ಉಸಿರಾಡುವುದಕ್ಕೂ ಅವಕಾಶವಿರಲಿಲ್ಲ. ನರಬಲಿ ಕೊಡಬೇಕಾಗಿ ಬಂದ ಒಬ್ಬ ಬ್ರಾಹ್ಮಣನ ಮೇಲಿನ ಸಹಾನುಭೂತಿಯಿಂದ ನೀವು ಆ ಬಕಾಸುರನನ್ನು ಧ್ವಂಸಮಾಡಿಬಿಟ್ಟಿರಿ. ಅದರಿಂದ ಆ ಊರಿನ ಜನಗಳಿಗಿದ್ದ ದೊಡ್ಡ ಕಂಟಕ ಪರಿಹಾರವಾಯಿತು. ಇದಾದ ಎಷ್ಟೋ ವರ್ಷಗಳ ನಂತರ ಕಿರ್ಮೀರನೆಂಬ ಆ ಬಕಾಸುರನ ತಮ್ಮನೂ ದೊಡ್ಡ ಕೇಡಿಗನಾಗಿದ್ದನು. ಅವನನ್ನೂ ನೀವು ಅಪ್ಪಳಿಸಿಹಾಕಿಬಿಟ್ಟಿರಿ. ಇಂಥಾ ಕುರುಕುಲಾಗ್ರಣಿಗಳಾದ ನಿಮಗೆ ನಾವು ಕಾಯಾವಾಚಾಮನಸಾ ನಮಸ್ಕಾರ ಮಾಡುತ್ತೇವೆ.

(**ಸೂಚನೆ**—ಬಕಾಸುರನ ವಧೆಯ ವಿಚಾರ ಮಹಾಭಾರತದ ಆದಿಪರ್ವ

**ನಿರ್ಮೃದ್ನನ್ನತ್ಯಯತ್ನಂ ವಿಜರವರ ಜರಾ ಸಂಧಕಾಯಾಸ್ಥಿ-ಸಂಧೀನ್**
(ಪಾಠಾಂ. ನಿರ್ಮತ್ನ-ನ್ನಪ್ರಯತ್ನಂ)
**ಯುದ್ಧೇ ತ್ವಂ ಸ್ವಧ್ವರೇ ವಾ ಪಶುಮಿವ ದಮಯನ್**
**ವಿಷ್ಣುಪಕ್ಷದ್ವಿಡೀಶಮ್** (ಪಾಠಾಂ. ಶಂ)

---

ದಲ್ಲಿ ಹತ್ತನೇ ಉಪಪರ್ವದ ೭೧ ರಿಂದ ೭೮ರ ವರೆಗಿನ ಎಂಟು ಅಧ್ಯಾಯ ಗಳಲ್ಲೂ, ಕಿರ್ಮೀರನ ವಧವೃತ್ತಾಂತ ವನಪರ್ವದ ಪ್ರಾರಂಭದ ಹನ್ನೊಂದು ಅಧ್ಯಾಯಗಳಲ್ಲೂ ಬಂದಿದೆ.)

**ಶ್ಲೋಕ ೨೩**—(ನಿರ್ಮೃದ್ನಾನ್) ಲೋಕಕ್ಕೆ ದೊಡ್ಡ ಕಂಟಕನಾಗಿದ್ದ ಜರಾಸಂಧನನ್ನು ವಧೆಮಾಡಿದ ಮಹಿಮೆಯನ್ನು ಈ ಶ್ಲೋಕದಲ್ಲಿ ನಿರೂಪಣೆ ಮಾಡುತ್ತಾರೆ.

**ಪ್ರಧಾನವಾಕ್ಯ**—ಭಗವನ್ ! ತ್ವಂ ಜರಾಸಂಧ(ಂ) ದಮಯನ್ ಯಾವತ್ ತರ್ಪಯಾಮಾಸಿಥ, ಅಸೌ ರಾಜಸೂಯಾಶ್ವಮೇಧೇ ತಾವತ್ತಾ ತೃಪ್ತ್ಯೈ ಅಯೋಜಿಕಿಮು ? ವದ=ಹೇ ಭಗವನ್ ಭೀಮಸೇನ, ನೀವು ಜರಾಸಂಧ(ನನ್ನು) ಸಂಹಾರಮಾಡಿ ಎಷ್ಟು ತೃಪ್ತಿಪಡಿಸಿದಿರೋ ಈ ಕೃಷ್ಣನು ರಾಜಸೂಯ-ಅಶ್ವಮೇಧ ಎರಡರಿಂದಲೂ ಅಷ್ಟು ತೃಪ್ತಿ ಹೊಂದಿದನೇ? (ನೀವೇ) ಹೇಳಿ.

**ಅನ್ವಯಾರ್ಥ**—ವಿಜರವರ—**ವಿಜರ**- ದೇವತೆಗಳಲ್ಲಿ, **ವರ**-ಶ್ರೇಷ್ಠರಾದ ಎಂದರೆ ದೇವೋತ್ತಮರಾದ, **ಭಗವನ್**-ಎಲೈ ಭೀಮಸೇನನೇ, **ತ್ವಂ**-ನೀವು, ಜರಾ....ಸಂಧೀನ್—**ಜರಾಸಂಧ**-ಜರಾಸಂಧನೆಂಬ ದೈತ್ಯನ, **ಕಾಯ**-ದೇಹದ, **ಅಸ್ಥಿ**-ಮೂಳೆಗಳ, **ಸಂಧೀನ್**-ಕೀಲುಗಳನ್ನು, **ಅತ್ಯಯತ್ನಂ**-(ಪಾಠಾಂ. ಅಪ್ರಯತ್ನಂ)-ಅನಾಯಾಸವಾಗಿ, **ನಿರ್ಮೃದ್ನನ್** (ಪಾಠಾಂ. ನಿರ್ಮತ್ನನ್)-ಜಜ್ಜಿಹಾಕಿ (ಮರ್ದನಮಾಡಿ), ವಿಷ್ಣು....ಡೀಶಂ—**ವಿಷ್ಣು**-ಶ್ರೀಹರಿಯ, **ಪಕ್ಷ**-ಗುಂಪಿಗೆ ಸೇರಿದ ದೇವತೆಗಳ ಮತ್ತು ವೈಷ್ಣವರ, **ದ್ವಿಟ್**-

**ಯಾವತ್ ಪ್ರತ್ಯಕ್ಷಭೂತಂ ನಿಖಿಲಮುಖಭುಜಂ ತರ್ಪಯಾಮಾಸಿಥಾಸೌ**
**ತಾವತ್ಯಾಽಯೋಜಿ ತೃಪ್ತ್ಯಾ ಕಿಮು ವದ ಭಗವನ್**
**ರಾಜಸೂಯಾಶ್ವಮೇಧೇ ॥ ೨೩ ॥**

---

ದ್ವೇಷಿಗಳಲ್ಲಿ, **ಈಶಂ**–ಮುಖಂಡನಾದ ಜರಾಸಂಧನನ್ನು, **ಸ್ವಧ್ವರೇವಾ**–ಯಾಗದಲ್ಲಿ, **ಪಶುಂ ಇವ**–ಯಜ್ಞಪಶುವನ್ನು ಬಲಿಕೊಡುವಂತೆ, **ಯುದ್ಧೇ**–ಯುದ್ಧದಲ್ಲಿ, **ದಮಯನ್**–ಸಂಹಾರಮಾಡಿ, **ಪ್ರತ್ಯಕ್ಷಭೂತಂ**–ಪ್ರತ್ಯಕ್ಷವಾಗಿ ಎದುರಿಗೆ ನಿಂತು ನೋಡುತ್ತಿದ್ದ, **ನಿಖಿಲ...ಭುಜಂ**—**ನಿಖಿಲ**–ಸಮಸ್ತವಾದ, **ಮುಖ**–ಯಜ್ಞಗಳಿಗೂ, **ಭುಜಂ**–ಭೋಕ್ತನಾದ ಶ್ರೀಕೃಷ್ಣನನ್ನು, **ಯಾವತ್**–ಎಷ್ಟು, **ತರ್ಪಯಾಮಾಸಿಥ**–ತೃಪ್ತಿಪಡಿಸಿದಿರೋ, **ಅಸೌ**–ಈ ಕೃಷ್ಣನು, **ರಾಜಸೂಯಾಶ್ವಮೇಧೇ**–ರಾಜಸೂಯಯಾಗ–ಅಶ್ವಮೇಧಯಜ್ಞ ಎರಡರಿಂದಲೂ, **ತಾವತ್ಯಾ**–ಅಷ್ಟು, **ತೃಪ್ತ್ಯಾ**–ತೃಪ್ತಿಯಿಂದ, **ಅಯೋಜಿಕಿಮು**–ಹೊಂದಿಸಲ್ಪಟ್ಟನೇನು ? **ವದ**–ನೀವೇ ಹೇಳಿರಿ.

**ತಾತ್ಪರ್ಯ**—ಹೇ ಭಗವನ್ ಭೀಮಸೇನ, ವಿಷ್ಣುವೈಷ್ಣವರ ಪ್ರಬಲ ದ್ವೇಷಿಯಾಗಿದ್ದ ಜರಾಸಂಧನನ್ನು ಯುದ್ಧದಲ್ಲಿ ಎದುರಿಸಿ ಅವನ ಎಲುಬುಗಳನ್ನೆಲ್ಲಾ ಹುಡಿಗುಟ್ಟಿಸಿದ್ದಲ್ಲದೆ ಅವನ ದೇಹವನ್ನು ಸೀಳಿಹಾಕಿ ಅವನ ಸಂಹಾರವನ್ನು ಮಾಡಿದಿರಿ. ನಿಮ್ಮಿಬ್ಬರ ಆ ದ್ವಂದ್ವಯುದ್ಧವನ್ನು ಪ್ರತ್ಯಕ್ಷ ಸಾಕ್ಷಿಯಾಗಿ ನಿಂತು ಆ ಕೃಷ್ಣನೇ ನೋಡುತ್ತಿದ್ದ. ಆ ಭಗವಂತನೇ ಸಕಲ ಯಜ್ಞಗಳಿಗೂ ನಿಯಾಮಕನೂ ಫಲಭೋಕ್ತನೂ ಆದ್ದರಿಂದ ಯುದ್ಧವೆಂಬ ಯಜ್ಞದಲ್ಲಿ ಪಶುರೂಪಿಯಾದ ಆ ಜರಾಸಂಧನನ್ನು ಸಂಹರಿಸಿ ಅಲ್ಲೇ ಪ್ರತ್ಯಕ್ಷವಾಗಿ ನಿಂತು ನೋಡುತ್ತಿದ್ದ ಶ್ರೀಕೃಷ್ಣಪರಮಾತ್ಮನಿಗೆ 'ಶ್ರೀಕೃಷ್ಣಾರ್ಪಣ' ಎಂದು ಭಕ್ತಿಯಿಂದ ಸಮರ್ಪಿಸಿದ್ದರಿಂದ ಆ ಭಗವಂತನಿಗೆ ಎಷ್ಟು ತೃಪ್ತಿಯಾಯಿತೋ ಅಷ್ಟು ತೃಪ್ತಿಯ ಲೇಶಾಂಶವಾದರೂ ಆ ಸ್ವಾಮಿಗೆ ಧರ್ಮರಾಜ ಮಾಡಿದ ರಾಜಸೂಯಯಾಗ ಅಶ್ವಮೇಧಯಜ್ಞ ಎರಡರಿಂದಲೂ ಆಯಿತೇನು? ಖಂಡಿತ ಇಲ್ಲ. ಇದು ಸ್ವತಃಸಿದ್ಧವಾದ ವಿಷಯವಾಗಿದೆ.

**ಶ್ಲೋಕ ೨೪**—(ಕ್ಷೇಲಾಕ್ಷೀಣ) ಹೀಗೆ ಬಕಾಸುರ-ಕಿರ್ಮೀರ-ಜರಾಸಂಧ

**ಕ್ಷ್ವೇಲಾಕ್ಷೀಣಾಟ್ಟಹಾಸಂ ತವ ರಣಮರಿಹ-**
**ನ್ನುದ್ಗದೋದ್ದಾಮಬಾಹೋ (ಪಾಠಾಂ. ಬಾಹೋಃ)**
**ಬಹ್ವಕ್ಷೌ ಹಿಣ್ಯನೀಕ-ಕ್ಷಪಣ ಸುನಿಪುಣಂ ಯಸ್ಯ ಸರ್ವೋತ್ತಮಸ್ಯ ।**
**(ಪಾಠಾಂ. ಬಹ್ವಕ್ಷೋಃ)**

---

ರನ್ನು ಸಂಹರಿಸಿದ್ದು ಮಾತ್ರವಲ್ಲ; ಕೌರವ-ಪಾಂಡವರ ಯುದ್ಧದಲ್ಲೂ ಅನೇಕ ದುಷ್ಟರನ್ನು ಸಂಹರಿಸಿ ಭೂಭಾರ ಇಳಿಸಿ ಭಗವತ್ಕಾರ್ಯವನ್ನು ಸಾಧಿಸಿದ್ದನ್ನು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ.

**ಪ್ರಧಾನವಾಕ್ಯ**—೧) (ತ್ವಂ) ರಣಂ ಯಸ್ಯ ಶುಶ್ರೂಷಾರ್ಥಂ ಚಕರ್ಥ ತವ ಸಂವಕ್ತುಂ ಸ್ವಯಂ ಅಯಂ ಸಮರ್ಥಃ—ಭಗವಂತನ ಸೇವೆಗಾಗಿಯೇ ನೀವು ಮಾಡಿದ ಯುದ್ಧವನ್ನು ಸ್ವಯಂ ಆ ಭಗವಂತನೇ ವರ್ಣಿಸಲು ಸಮರ್ಥ. ೨) ಅಥ ತ್ವಮಪಿ (ಸಮರ್ಥಃ)—ಅವನ ನಂತರ ನೀವೂ ಸಮರ್ಥರು. ೩) ಯುವ ಯೋಃ ಪಾದಪದ್ಮಂ ಪ್ರಪದ್ಯೇ-ನಿಮ್ಮಿಬ್ಬರ ಪಾದಪದ್ಮಗಳನ್ನು ಶರಣು ಹೊಂದುತ್ತೇನೆ.

**ಅನ್ವಯಾರ್ಥ**—**ಅರಿಹನ್**-ಶತ್ರುಸಂಹಾರಕರಾದ, **ಉದ್ಗ........ ಬಾಹೋ**—**ಉದ್ಗದ**-ಉತ್ಕೃಷ್ಟವಾದ ಗದೆಯುಳ್ಳವನೇ ಅಥವಾ ಉತ್ಕೃಷ್ಟವಾದ ಗದೆಯಿಂದ, **ಉದ್ದಾಮಬಾಹೋ**-ಎದುರಿಲ್ಲದ ಬಾಹುಬಲವುಳ್ಳ, ಭೀಮಸೇನನೇ! **ಕ್ಷ್ವೇಲಾ....ಹಾಸಂ**—**ಕ್ಷ್ವೇಲಾ**-ಸಿಂಹನಾದದಿಂದ, **ಕ್ಷೀಣ**-ಕುಗ್ಗಿ ಹೋಗುವ, **ಅಟ್ಟಹಾಸಂ**-ಶತ್ರುಗಳ ಗರ್ವವುಳ್ಳ, ಅಥವಾ **ಕ್ಷ್ವೇಲಾ**-ಶತ್ರುಗಳ ಸಿಂಹನಾದದಿಂದ, **ಅಕ್ಷೀಣ**-ಕುಗ್ಗದೇ ಇರುವ, **ಅಟ್ಟಹಾಸಂ**-ಹುಮ್ಮಸ್ಸುಳ್ಳ, **ಬಹ್ವ....ನಿಪುಣಂ**—**ಬಹು**-ಅನೇಕ, **ಅಕ್ಷೌ** (ಪಾಠಾಂ. **ಕ್ಷೋಹಿಣಿ**)-ಅಕ್ಷೌಹಿಣಿಗಳ, **ಅನೀಕ**-ಸೈನ್ಯವನ್ನು, **ಕ್ಷಪಣ**-ನಾಶಮಾಡುವುದರಲ್ಲಿ, **ನಿಪುಣಂ**-ದಕ್ಷವಾದ ಅಥವಾ ಸಮರ್ಥವಾದ, **ತವ**-ನಿಮ್ಮ, **ರಣಂ**-ಯುದ್ಧವನ್ನು, **ಸರ್ವೋತ್ತಮಸ್ಯ**-ಸರ್ವೋತ್ತಮನಾದ, **ಯಸ್ಯ**-ಯಾವ ಕೃಷ್ಣನ, **ಶುಶ್ರೂಷಾರ್ಥಂ**-ಸೇವೆಗಾಗಿ, **ಚಕರ್ಥ**-ನೀವು ಮಾಡಿದಿರೋ, (ಪಾಠಾಂ. ಉದ್ದಾಮ ಬಾಹೋಃ-ಎದುರಿಲ್ಲದ ಬಾಹುಪರಾಕ್ರಮವುಳ್ಳ), **ತವ ರಣಂ**-ನಿಮ್ಮ ಯುದ್ಧದ ವೈಖರಿಯನ್ನು, **ಸಂವಕ್ತುಂ**-ವರ್ಣಿಸುವುದಕ್ಕೆ

**ಶುಶ್ರೂಷಾರ್ಥಂ ಚಕರ್ಥ ಸ್ವಯಮಯಮಥ(ಮಿಹ)**
**ಸಂವಕ್ತುಮಾನಂದತೀರ್ಥ-**
**ಶ್ರೀಮನ್ನಾಮನ್ ಸಮರ್ಥಸ್-ತ್ವಮಪಿ ಹಿ ಯುವಯೋಃ**
**ಪಾದಪದ್ಮಂ ಪ್ರಪದ್ಯೇ ॥ ೨೪ ॥**

---

**ಸ್ವಯಂ ಅಯಂ**-ಸಾಕ್ಷಾತ್ ಆ ಶ್ರೀಕೃಷ್ಣನೇ (ವೇದವ್ಯಾಸರೇ), **ಸಮರ್ಥಃ**-ಸಮರ್ಥನು. ಅಥ-ಅನಂತರ, **ಆನಂದತೀರ್ಥ ಶ್ರೀಮನ್ನಾಮನ್**-ಆನಂದ ತೀರ್ಥರೆಂಬ ಪುಣ್ಯಕರವಾದ ಹೆಸರುಳ್ಳ ಹೇ ಮಧ್ವಾಚಾರ್ಯರೇ, **ತ್ವಮಪಿ**-ನೀವೂ ಕೂಡ, (ಪಾಠಾಂ. ಇಹ-ಈ ವರ್ಣನೆಯಲ್ಲಿ), **ಸಮರ್ಥಃ**-ಶಕ್ತ ರಾಗಿದ್ದೀರಿ. **ಯುವಯೋಃ**-ನಿಮ್ಮಿಬ್ಬರ, **ಪಾದಪದ್ಮಂ ಪ್ರಪದ್ಯೇ**-ಪಾದ ಕಮಲವನ್ನು ಶರಣುಹೊಂದುವೆನು.

**ತಾತ್ಪರ್ಯ**—ಸಕಲ ಶತ್ರುಸಂಹಾರಕರಾದ ಹೇ ಭೀಮಸೇನ ದೇವರೇ, ನಿಮ್ಮ ಬಾಹುಬಲವೇ ಅಪಾರವಾಗಿತ್ತು. ನೀವು ಕೇವಲ ನಿಮ್ಮ ಬಾಹುಬಲ ದಿಂದಲೇ ಅನೇಕಮಂದಿ ದುಷ್ಟ ದೈತ್ಯರನ್ನು ಧ್ವಂಸಮಾಡಿಬಿಟ್ಟಿರಿ. ಜೊತೆಗೆ ನೀವು ಕೈಯಲ್ಲಿ ಧರಿಸಿದ ಗದೆಯೂ ಕೂಡ ಹತ್ತುಸಾವಿರ ಆನೆಗಳ ಬಲವುಳ್ಳ ದ್ದಾದ್ದರಿಂದ ಆ ಗದೆಯನ್ನು ಎದುರಿಸುವ ಶಕ್ತಿಯು ಯಾರಿಗೂ ಇರಲಿಲ್ಲ. ನೀವು ಗದಾಪಾಣಿಗಳಾಗಿ ಶತ್ರುಗಳಮೇಲೆ ಸಿಂಹನಾದಮಾಡುತ್ತಾ ನುಗ್ಗಿದರೆ ಸಾಕು, ಎಂಥಾ ಶತ್ರುವಿನ ಅಟ್ಟಹಾಸವೂ ಅಡಗಿಹೋಗುತ್ತಿತ್ತು. ಭಾರತ ಯುದ್ಧದಲ್ಲಿ ನೆರೆದಿದ್ದ ಹದಿನೆಂಟು ಅಕ್ಷೌಹಿಣೀ ಸೈನ್ಯದಲ್ಲಿ ಎಲ್ಲರಿಗಿಂತಲ್ಲೂ ಹೆಚ್ಚಾಗಿ ಸೈನ್ಯ ನಾಶಮಾಡಿದ್ದು ನೀವೊಬ್ಬರೇ. ಅದಾದರೂ ನಿಮ್ಮ ಅಗ್ಗಳಿಕೆ ಯನ್ನು ತೋರಿಸಿಕೊಳ್ಳಲು ಮಾಡಲಿಲ್ಲ. ಆ ಭಗವಂತ ಭೂಭಾರಹರಣ ಕ್ಕಾಗಿಯೇ ಶ್ರೀಕೃಷ್ಣರೂಪದಿಂದ ಅವತಾರ ಮಾಡಿದ್ದ. ಅವನ ಆ ಕಾರ್ಯ ವನ್ನು ಸಾಧಿಸುವುದಕ್ಕಾಗಿಯೇ ನೀವು ಅಷ್ಟು ಸೈನ್ಯವನ್ನು ನಾಶಮಾಡಿದಿರಿ. ನಿಮ್ಮ ಆ ಯುದ್ಧದ ವೈಖರಿಯನ್ನು ವರ್ಣಿಸುವುದಕ್ಕೆ ಮಹಾಭಾರತವನ್ನು ಬರೆದ ಸಾಕ್ಷಾತ್ ಭಗವದ್ರೂಪರೇ ಆದ ವೇದವ್ಯಾಸರೊಬ್ಬರು ಸಮರ್ಥರು. ಅವರ ನಂತರ ಹೇ ಸ್ವಾಮಿ, ಆನಂದತೀರ್ಥಾಭಿಧಾನರಾದ ಹೇ ಮಧ್ವಾ

**ದ್ರುಹ್ಯಂತೀ ಹೃದ್ರುಹಂ ಮಾಂ ದ್ರುತಮನಿಲ ಬಲಾತ್**
**ದ್ರಾವಯಂತೀಮವಿದ್ಯಾ-**
**ನಿದ್ರಾಂ ವಿದ್ರಾವ್ಯ ಸದ್ಯೋ ರಚನಪಟುಮಥಾ-ಪಾದ್ಯ ವಿದ್ಯಾಸಮುದ್ರ।**

---

ಚಾರ್ಯರೇ, ನೀವೂ ಸಹ ಸಮರ್ಥರು. ಇಂಥಾ ಮಹಾಸಮರ್ಥರಾದ ನಿಮ್ಮಿಬ್ಬರ ಪಾದಕಮಲಗಳನ್ನೂ ನಾನು ಶರಣುಹೊಂದುತ್ತೇನೆ.

## (ಖ) ಶ್ಲೋಕ ೨೫-೨೬ ಪ್ರಾಸಂಗಿಕ ಎರಡು ವಿಚಾರಗಳು

**ಶ್ಲೋಕ ೨೫**—(ದ್ರುಹ್ಯಂತೀಂ) ಈ ಶ್ಲೋಕದಲ್ಲಿ ಪ್ರಸಂಗವಶಾತ್ ದ್ರೌಪದಿಯು ಅವಿದ್ಯೆಯನ್ನು ಪರಿಹರಿಸಲೆಂದು ಪ್ರಾರ್ಥಿಸಿಕೊಂಡಿದ್ದಾರೆ.

**ಪ್ರಧಾನವಾಕ್ಯ**—ಅನಿಲ ! ತೇ ದಯಿತಾ ವಾಗ್ದೇವೀ ಅವಿದ್ಯಾನಿದ್ರಾಂ ವಿದ್ರಾವ್ಯ, ಮಾಂ ರಚನಪಟುಂ ಆಪಾದ್ಯ ಅಭದ್ರಾತ್ ರಹಯತು = ಹೇ ವಾಯುದೇವರೇ, ನಿಮ್ಮ ಪತ್ನಿಯಾದ ಭಾರತೀದೇವಿಯು ನನ್ನ ಅವಿದ್ಯೆಯೆಂಬ ನಿದ್ದೆಯನ್ನು ಓಡಿಸಿ, ನನ್ನನ್ನು ರಚನಸಮರ್ಥನನ್ನಾಗಿ ಮಾಡಿ (ಎಂದರೆ ನನಗೆ ಕವಿತಾರಚನ ಶಕ್ತಿಯನ್ನು ಅನುಗ್ರಹಿಸಿ) ಅನಿಷ್ಟವನ್ನು ದೂರಮಾಡಲಿ.

**ಅನ್ವಯಾರ್ಥ**—೧) **ವಿದ್ಯಾಸಮುದ್ರ**–ವೇದಾದಿ ವಿದ್ಯೆಗಳಿಗೆ ಸಮುದ್ರದಂತೆ ಆಶ್ರಯವಾಗಿರುವ, ೨) ಸುವಿದ್ಯಾದ್ರವಿಣದ—**ಸು**–ಸಮೀಚೀನವಾದ, **ವಿದ್ಯಾ**–ಜ್ಞಾನವೆಂಬ, **ದ್ರವಿಣ**–ಧನವನ್ನು, **ದ್ರ**–ಕೊಡುವಂಥಾ, ೩) ಪೂರ್ವಭೀಮ—**ಪೂರ್ವ**–ಹಿಂದಿನ ಯುಗದಲ್ಲಿ, **ಭೀಮ**–ಭೀಮನಾಗಿದ್ದ, ೪) **ಅನಿಲ**–ಎಲೈ ವಾಯುದೇವರೇ ! ರುದ್ರ....ದ್ರಿಕ್ತಾ—**ರುದ್ರಪತ್ನೀ**–ಪಾರ್ವತೀ ದೇವಿಯೇ, **ಆದಿ**–ಮೊದಲಾದ ದೇವತಾಸ್ತ್ರೀಯರಿಗಿಂತಲೂ (ಅಥವಾ ದ್ರೌಪದಿಯಲ್ಲಿ ಆವಿಷ್ಟರಾಗಿದ್ದ ಶಚೀ ಮೊದಲಾದವರಿಗಿಂತಲೂ), **ಉದ್ರಿಕ್ತಾ**–ಶ್ರೇಷ್ಠಳಾದ, **ದ್ರೌಪದೀ**–ದ್ರೌಪದಾದೇವಿಯೆಂದು, **ವಿದಿತಾ**–ಪ್ರಸಿದ್ಧಳಾದ, **ತೇ**–ನಿಮ್ಮ, **ದಯಿತಾ**–ಪತ್ನಿಯಾದ, **ಸಾ**–ಆ, **ವಾಗ್ದೇವೀ**–ಭಾರತೀದೇವಿಯು, **ದ್ರುಹ್ಯಂತೀಂ**–ನನಗೆ ದ್ರೋಹಮಾಡುತ್ತಿರುವ, (ಖ) ಹೃದ್ರುಹಂ—**ಹೃತ್**–ಹೃದಯದಲ್ಲೇ, **ರುಹಂ**–ಬೆಳೆದು ನೆಲೆಸಿರುವ, (ಗ) **ಮಾಂ**–ನನ್ನನ್ನು,

**ವಾಗ್ದೇವೀ ಸಾ ಸುವಿದ್ಯಾ-ದ್ರವಿಣದ ವಿದಿತಾ ದ್ರೌಪದೀ ರುದ್ರಪತ್ನ್ಯಾ-**
**ದ್ಯುದ್ರಿಕ್ತಾ ದ್ರಾಗಭದ್ರಾ-ದ್ರಹಯತು ದಯಿತಾ**
**ಪೂರ್ವಭೀಮಾಜ್ಞಯಾ ತೇ ॥ ೨೫ ॥**

---

ಬಲಾತ್-ಬಲಾತ್ಕಾರದಿಂದ, ದ್ರಾವಯಂತೀಂ-ಓಡಾಡಿಸುತ್ತಿರುವ, (ಘೆ) ಅವಿದ್ಯಾನಿದ್ರಾಂ—ಅವಿದ್ಯಾ-ಅಜ್ಞಾನವೆಂಬ, ನಿದ್ರಾಂ-ನಿದ್ದೆಯನ್ನು, (ತೇ-ನಿಮ್ಮ) ಆಜ್ಞಯಾ ಅಪ್ಪಣೆಯಿಂದ, ದ್ರುತಂ-ಶೀಘ್ರವಾಗಿ, ವಿದ್ರಾವ್ಯ-ಓಡಿಸಿ, ಅಥ-ಅನಂತರ, (ಮಾಂ-ನನ್ನನ್ನು), ಸದ್ಯಃ-ಆ ಕೂಡಲೇ (ತತ್‌ಕ್ಷಣ), ರಚನಪಟುಂ—ರಚನ-ಕವಿತೆಯನ್ನು ರಚಿಸಲು, ಪಟುಂ-ಸಮರ್ಥನನ್ನಾಗಿ, ಆಪಾದ್ಯ-ಮಾಡಿ, (ದ್ರಾಕ್-ಶೀಘ್ರವಾಗಿ), ಅಭದ್ರಾತ್-ಅಮಂಗಳದಿಂದ (ಅನಿಷ್ಟಗಳಿಂದ), ರಹಯತು-ದೂರ ಒಯ್ಯಲಿ ಅಥವಾ ಬಿಡಿಸಲಿ.

**ತಾತ್ಪರ್ಯ**—ಹೇ ವಾಯುದೇವರೇ, ನೀವು ಹಿಂದೆ ದ್ವಾಪರಯುಗದಲ್ಲಿ ಭೀಮಸೇನನಾಗಿ ಅವತಾರ ಮಾಡಿದ್ದಿರಷ್ಟೆ. ನಿಮ್ಮ ಪತ್ನಿಯಾದ ಭಾರತೀ ದೇವಿಯು ಆಗ ದ್ರೌಪದಿಯಾಗಿ ಅವತಾರ ಮಾಡಿದಳು. ಆ ಭಾರತೀದೇವಿಯು ಪಾರ್ವತ್ಯಾದಿ ಸಕಲ ದೇವತಾಸ್ತ್ರೀಯರಿಗಿಂತಲೂ ತಾರತಮ್ಯದಲ್ಲಿ ಶ್ರೇಷ್ಠಳಾದ್ದ ರಿಂದ ದ್ರೌಪದಿಯಲ್ಲಿ ಆವಿಷ್ಟರಾಗಿದ್ದ ಶಚೀ ಶ್ಯಾಮಲಾ ಉಷಾದೇವಿಯರಿಗಿಂತ ದ್ರೌಪದಿಯು ಉತ್ತಮಳೇ ಆಗಿದ್ದಳು. ವಾಗ್ದೇವಿಯಾದ ಆ ಭಾರತೀದೇವಿಯು ನಿಮ್ಮ ಪತ್ನಿಯಾದ್ದರಿಂದ ನಿಮ್ಮ ಆಜ್ಞಾನುಸಾರ ನನಗೆ ಕವಿದುಕೊಂಡಿರುವ ಅಜ್ಞಾನವೆಂಬ ನಿದ್ದೆಯನ್ನು ದೂರಮಾಡಿ, ನನಗೆ ಶೀಘ್ರವಾಗಿ ಕವಿತೆಗಳನ್ನು ರಚನೆಮಾಡುವ ಶಕ್ತಿಯನ್ನು ಕರುಣಿಸಲಿ. ಮತ್ತು ಯಾವ ವಿಧವಾದ ಅನಿಷ್ಟವೂ ನನ್ನ ಹತ್ತಿರವೇ ಸುಳಿಯದಂತೆ ಮಾಡಲಿ.

**ಶ್ಲೋಕ ೨೬**—(ಯಾಭ್ಯಾಂ) ಎಲ್ಲ ವಿದ್ವಾಂಸರೂ ಶ್ರೀಕೃಷ್ಣನು ನಾರಾಯಣನ ಅವತಾರವೆಂದು ಒಪ್ಪಿದರೂ ಬೇರೆ ಮತದ ಅನೇಕ ವಿದ್ವಾಂಸರೂ ಗ್ರಂಥಕಾರರೂ ವೇದವ್ಯಾಸರಿಗೆ ಕೃಷ್ಣ (ವಾಸಿಷ್ಠಕೃಷ್ಣ) ಎಂಬ ಹೆಸರೇ ಪ್ರಸಿದ್ಧಿ ಇದ್ದರೂ ಅವರು ನಾರಾಯಣನ ಅವತಾರವೇ ಅಲ್ಲವೆಂಬು ಪ್ರತಿಯಾಗಿ

**ಯಾಭ್ಯಾಂ ಶುಶ್ರೂಷುರಾಸೀಃ ಕುರುಕುಲಜನನೇ**
**ಕ್ಷತ್ರವಿಪ್ರೋದಿತಾಭ್ಯಾಂ**
**ಬ್ರಹ್ಮಭ್ಯಾಂ ಬೃಂಹಿತಾಭ್ಯಾಂ ಚಿತಿಸುಖವಪುಷಾ**
**ಕೃಷ್ಣನಾಮಾಸ್ಪದಾಭ್ಯಾಮ್ ।**

---

ಯಾರೋ ಒಬ್ಬ ಸಾಧಾರಣ ಋಷಿಯೆಂದೂ ಹೇಳುತ್ತಾರೆ. ಪಂಡಿತಾಚಾರ್ಯರ ಈ ಶ್ಲೋಕದಲ್ಲಿ, ಅವರ ವಾದಕ್ಕೆ ಪ್ರತಿಯಾಗಿ, ಇಬ್ಬರು ಕೃಷ್ಣರೂ ಭಗವದ್ರೂಪಗಳೇ ಆಗಿದ್ದಾರೆಂದೂ ಆ ಇಬ್ಬರ ಸೇವೆಗಾಗಿಯೇ ವಾಯುದೇವರು ಭೀಮನಾಗ ಅವತರಿಸಿದರೆಂದೂ ಸಮರ್ಥಿಸುತ್ತಾ, ಅಭಿನ್ನರಾದ ವ್ಯಾಸ ಕೃಷ್ಣರಿಗೂ ಭೀಮರೂಪಿಯಾದ ವಾಯುದೇವರಿಗೂ ಒಟ್ಟಿಗೆ ವಂದಿಸುತ್ತಾರೆ.

**ಪ್ರಧಾನವಾಕ್ಯ**—ಕು ರು ಕು ಲ ಜ ನ ನೇ ಕೃಷ್ಣನಾಮಾಸ್ಪದಾಭ್ಯಾಂ ಯಾಭ್ಯಾಂ ಶುಶ್ರೂಷುಃ ಆಸೀಃ, ಅಮೂಭ್ಯಾಂ ತುಭ್ಯಂ ಚ ನಮಃ ಅಸ್ತು = ಕುರುವಂಶದಲ್ಲಿ ಹುಟ್ಟುವುದರಲ್ಲಿ ನಿಮ್ಮ ಉದ್ದೇಶವು ಕೃಷ್ಣನೆಂದೇ ಕರೆಯಲ್ಪಡುವ ವ್ಯಾಸ-ಕೃಷ್ಣರಿಗೂ ಸೇವೆ ಮಾಡುವುದೇ ಆಗಿತ್ತು. ಅಂಥಾ ಆ ಇಬ್ಬರಿಗೂ ನಿಮಗೂ ನಮಸ್ಕಾರ. (ಸೂಚನೆ:—ನಮಃ ಶಬ್ದ ಬಂದಾಗ ಚತುರ್ಥೀವಿಭಕ್ತಿಯೇ ಬರಬೇಕೆಂದು ವ್ಯಾಕರಣ ನಿಯಮವಿರುವುದರಿಂದ 'ಭ್ಯಾಂ' ಎಂದು ಕೊನೆಯಾಗುವ ಎಲ್ಲ ಪದಗಳೂ ಚತುರ್ಥೀ ದ್ವಿವಚನದಲ್ಲಿವೆ ಎಂದು ತಿಳಿಯಬೇಕು.)

**ಅನ್ವಯಾರ್ಥ**—(ವಾಯೋ–ಎಲೈ ವಾಯುದೇವರೇ) ಕುರು........ ಜನನೇ—**ಕುರುಕುಲ**–ಕುರುವಂಶದಲ್ಲಿ, **ಜನನೇ**–ಹುಟ್ಟುವುದರಲ್ಲಿ, (ಯ) **ಚಿತಿ**....ವಪುಷಾ—**ಚಿತಿ**–ಜ್ಞಾನವೂ, **ಸುಖ**–ಆನಂದವೂ ಇವೇ ಮೊದಲಾದ ಗುಣಸ್ವರೂಪವಾದ, **ವಪುಷಾ**–ಅಪ್ರಾಕೃತದೇಹದಿಂದ, **ಬೃಂಹಿತಾಭ್ಯಾಂ**–ಕೂಡಿರುವ, (ರ) **ವಿಶೇಷಾತ್**–ವಿಶೇಷವೆಂಬ ಧರ್ಮದಿಂದ, **ದ್ವಿವಚನ-ವಿಷಯಾಭ್ಯಾಂ**–ಎರಡು ಭಿನ್ನರೂಪಗಳೆಂದು ಕಾಣಿಸುತ್ತಿದ್ದರೂ, (ಲ) **ನಿರ್ಭೇದಾಭ್ಯಾಂ**–ಭೇದವಿಲ್ಲದ, (ವ) ಕ್ಷತ್ರ....ತಾಭ್ಯಾಂ—**ಕ್ಷತ್ರ**–ಒಬ್ಬನು (ಕೃಷ್ಣನು) ಕ್ಷತ್ರಿಯನೆಂದೂ, **ವಿಪ್ರ**–ಇನ್ನೊಬ್ಬರು (ವ್ಯಾಸರು) ಬ್ರಾಹ್ಮಣ

**ನಿರ್ಭೇದಾಭ್ಯಾಂ ವಿಶೇಷಾದ್ ದ್ವಿವಚನವಿಷಯಾ-**
**ಭ್ಯಾಮುಭಾಭ್ಯಾ-ಮಮೂಭ್ಯಾಂ**
**ತುಭ್ಯಂ ಚ ಕ್ಷೇಮದೇಭ್ಯಃ ಸರಸಿಜ ವಿಲಸ-ಲ್ಲೋಚನೇಭ್ಯೋ**
**ನಮೋಽಸ್ತು ॥ ೨೬ ॥**

---

ರೆಂದೂ, **ಉದಿತಾಭ್ಯಾಂ**-ಹೇಳಲ್ಪಡುವ, (ಶ) ಕೃಷ್ಣ....ದಾಭ್ಯಾಂ—**ಕೃಷ್ಣ**-ಯಾದವ ಕೃಷ್ಣನೆಂದೂ ವಾಸಿಷ್ಠ ಕೃಷ್ಣನೆಂದೂ, **ನಾಮ**–ಒಂದೇ ಹೆಸರಿಗೆ, **ಆಸ್ಪದಾಭ್ಯಾಂ**–ಆ ಶ್ರ ಯ ರಾ ದ, (ಷ) **ಯಾಭ್ಯಾಂ**–ಯಾವ, (ಸ) **ಅಮೂಭ್ಯಾಂ**-ಕೃಷ್ಣ-ವ್ಯಾಸರೆಂಬ, (ಹ) **ಬ್ರಹ್ಮಭ್ಯಾಂ**–ನಾರಾಯಣಸ್ವರೂಪ ರಾದ ಇಬ್ಬರಿಗೆ, **ಶುಶ್ರೂಷುಃ**–ಸೇವೆಮಾಡಲು ಇಚ್ಛೆಯುಳ್ಳವನಾಗಿ. **ಆಸೀಃ**–ಇದ್ದರೋ, **ಕ್ಷೇಮದೇಭ್ಯಃ**–ಮಂಗಳಪ್ರದರಾದ, ಸರಸಿಜ....ನೇಭ್ಯಃ—**ಸರಸಿಜ**–ಕಮಲದಂತೆ. **ವಿಲಸತ್**–ಪ್ರಕಾಶಿಸುವ, **ಲೋಚನೇಭ್ಯಃ**–ಕಣ್ಣುಗಳುಳ್ಳ, **ಉಭಾಭ್ಯಾಂ**–ಕೃಷ್ಣ-ವ್ಯಾಸ ಇಬ್ಬರಿಗೂ, **ತುಭ್ಯಂ ಚ**–ನಿಮಗೂ, **ನಮಃ ಅಸ್ತು**–ನಮಸ್ಕಾರವು ಇರಲಿ.

**ತಾತ್ಪರ್ಯ**—ಹೇ ವಾಯುದೇವರೇ, ನೀವು ದ್ವಾಪರದಲ್ಲಿ ಕುರುವಂಶ ದಲ್ಲಿ ಭೀಮಸೇನನಾಗಿ ಅವತಾರಮಾಡಿದ್ದು 'ಭಗವತ್ಕಾರ್ಯಸಾಧಕಃ' ಎಂಬ ಪ್ರಮಾಣಕ್ಕೆ ಅನುಸಾರವಾಗಿ ಕೇವಲ ಭಗವಂತನ ಸೇವೆಮಾಡುವ ಉದ್ದೇಶ ದಿಂದಲೇ ಹೊರತು ಬೇರೆ ಯಾವ ಉದ್ದೇಶವೂ ಇರಲಿಲ್ಲ. ದ್ವಾಪರಯುಗದಲ್ಲಿ ಆ ಭಗವಂತನೇ ಕೃಷ್ಣ-ವೇದವ್ಯಾಸ ಎಂಬ ಎರಡು ರೂಪಗಳಿಂದ ಅವತಾರ ಮಾಡಿದನು. ಈ ಪೈಕಿ ಕೃಷ್ಣ ಕ್ಷತ್ರಿಯಜಾತಿಗೆ ಸೇರಿದ ಯಾದವಕುಲದಲ್ಲಿ ಅವತಾರಮಾಡಿ ಯಾದವ-ಕೃಷ್ಣನೆಂದು ಪ್ರಸಿದ್ಧನಾದನು. ಇನ್ನೊಬ್ಬರು ಬ್ರಾಹ್ಮಣಜಾತಿಗೆ ಸೇರಿದ ವಸಿಷ್ಠರ ವಂಶದಲ್ಲಿ ವಸಿಷ್ಠರಿಗೆ ಮರಿಮೊಮ್ಮಗನಾಗಿ ಅವತರಿಸಿ ವಾಸಿಷ್ಠಕೃಷ್ಣನೆಂದು ಪ್ರಸಿದ್ಧರಾದರು. ಹೀಗೆ ಆ ಭಗವಂತ ಎರಡು ಭಿನ್ನರೂಪಗಳಿಂದ, ವಿಶೇಷವೆಂಬ ಧರ್ಮದಿಂದ ಬೇರೆ ಬೇರೆಯಾಗಿ ಇದ್ದಂತೆ ಕಂಡರೂ ವಸ್ತುತಃ ಅವರಿಬ್ಬರಿಗೂ ಯಾವ ಕಿಂಚಿದ್ಭೇದವೂ ಇಲ್ಲ. ಏಕೆಂದರೆ ಇಬ್ಬರದೂ ಜ್ಞಾನಾನಂದಾದಿ ಅನಂತಗುಣಮಯವಾದ ಅಪ್ರಾಕೃತ ಶರೀರಗಳೇ ಆಗಿವೆ. (ಹೀಗಿದ್ದರೂ ಕೆಲವರು ಕೃಷ್ಣನನ್ನು ನಾರಾಯಣಾವತಾರವೆಂದು

**ಗಚ್ಛನ್ ಸೌಗಂಧಿಕಾರ್ಥಂ ಪಥಿ ಸ ಹನುಮತಃ ಪುಚ್ಛಮಚ್ಛಸ್ಯ ಭೀಮಃ ಪ್ರೋದ್ಧರ್ತುಂ ನಾಶಕತ್ ಸ ತ್ವಮುಮುರುವಪುಷಾ**
**ಭೀಷಯಾಮಾಸ ಚೇತಿ ।**

---

ಒಪ್ಪಿಕೊಂಡರೂ ವೇದವ್ಯಾಸರನ್ನು ಸಾಮಾನ್ಯ ಋಷಿಯೆಂದೂ ನಾರಾಯಣನ ಅವತಾರವೇ ಅಲ್ಲವೆಂದೂ ಹೇಳುತ್ತಾರೆ—ಇದು ಸರ್ವಥಾ ಅನುಚಿತ ) ಈ ಪ್ರಕಾರ ಎರಡಾಗಿ ಕಂಡರೂ ಅಭಿನ್ನರಾದ ಭಗವತ್ಸ್ವರೂಪರಾದ ಕೃಷ್ಣ-ವೇದವ್ಯಾಸರಿಗೂ ಭೀಮರೂಪರಾದ ನಿಮಗೂ ಅನಂತ ನಮಸ್ಕಾರಗಳು.

## (ಗ) ಸೌಗಂಧಿಕಾ ಪುಷ್ಪಹರಣ ಪ್ರಸಂಗ (ಶ್ಲೋಕ ೨೭-೨೮)

**ಅವತಾರಿಕೆ**—ಈ ಎರಡು ಶ್ಲೋಕಗಳಲ್ಲೂ ಭೀಮಸೇನನು ಸೌಗಂಧಿಕಾ ಪುಷ್ಪಗಳನ್ನು ತರುವುದಕ್ಕೆ ಹೋಗಿದ್ದಾಗ ನಡೆದ ಘಟನೆಗಳನ್ನು ವಿವರಿಸುತ್ತಾರೆ. ಮೊದಲನೇ ಶ್ಲೋಕದಲ್ಲಿ ವಾಯುದೇವರ ಪುತ್ರರೇ ಆದ ಹನುಮಂತನಿಗೂ, ಭೀಮನಿಗೂ ಭೇಟಿಯಾದ ವಿಚಾರ ಪ್ರಸಕ್ತವಾಗಿದೆ. ಅದು ಅಜ್ಞ ಜನಗಳಿಗೆ ಮೋಹಕವಾಗಿತ್ತು ಎಂದು ಹೇಳುತ್ತಾರೆ.

**ಶ್ಲೋಕ ೨೭**—(ಗಚ್ಛನ್) **ಪ್ರಧಾನವಾಕ್ಯ** — ಸೌಗಂಧಿಕಾರ್ಥಂ ಗಚ್ಛನ್ ಭೀಮಃ ಹನುಮಂತಃ ಪುಚ್ಛಂ ಪ್ರೋದ್ಧರ್ತುಂ ನಾಶಕತ್, ಸಃ ಅಮುಂ ಭೀಷಯಾಮಾಸ ಚ, ಇತಿ ತದೇತತ್ ಕ್ರೀಡಾಮಾತ್ರಮ್ = ಸೌಗಂಧಿಕಾ ಪುಷ್ಪವನ್ನು ತರಲು ಹೋದಾಗ ಭೀಮನು ಹನುಮಂತನ ಬಾಲವನ್ನು ಎತ್ತಲಾರದೆ ಹೋದನು. ಹನುಮಂತನು ಭೀಮನನ್ನು ಹೆದರಿಸಿಬಿಟ್ಟನು ಎಂಬುದು ಕ್ರೀಡಮಾತ್ರವಾಗಿದೆ.

**ಅನ್ವಯಾರ್ಥ**—**ಸೌಗಂಧಿಕಾರ್ಥಂ**-ಸೌಗಂಧಿಕಾ ಎಂಬ ಪುಷ್ಪಗಳಿಗಾಗಿ, **ಗಚ್ಛನ್**-ಹೋಗುತ್ತಿದ್ದ, **ಸಃ**-ಆ, **ಭೀಮಃ**-ಭೀಮಸೇನನು, **ಪಥಿ**-ದಾರಿಯಲ್ಲಿ, **ಅಚ್ಛಸ್ಯ**-ಪರಿಶುದ್ಧನಾದ, **ಹನುಮತಃ**-ಹನುಮಂತನ, **ಪುಚ್ಛಂ**-ಬಾಲವನ್ನು, **ಪ್ರೋದ್ಧರ್ತುಂ**-ಎತ್ತುವುದಕ್ಕೆ, **ನ ಅಶಕತ್**-ಸಮರ್ಥನಾಗಲಿಲ್ಲ, **ಸಃ**-ಆ ಹನುಮಂತನು, **ಅಮುಂ**-ಈ ಭೀಮನನ್ನು,

**ಪೂರ್ಣಜ್ಞಾನೌಜಸೋಸ್ತೇ ಗುರುತಮ ವಪುಷೋಃ**
**ಶ್ರೀಮದಾನಂದತೀರ್ಥ**
**ಕ್ರೀಡಾಮಾತ್ರಂ ತದೇತತ್ ಪ್ರಮುದದ ಸುಧಿಯಾಂ ಮೋಹಕ**
**ದ್ವೇಷಭಾಜಾಮ್ || ೨೭ ||**

---

**ಉರುವಪುಷಾ**- ದೊಡ್ಡ ದೇಹದಿಂದ, **ಭೀಷಯಾಮಾಸ ಚ** ಹೆದರಿಸಿಬಿಟ್ಟನು, **ಇತಿ**-ಎಂಬ, **ತತ್‌ಏತತ್**-ಇದೆಲ್ಲವೂ, **ಸುಧಿಯಾಂ**-ಸದ್ಬುದ್ಧಿಯುಳ್ಳವರಿಗೆ, **ಪ್ರಮುದದ**-ಸಂತೋಷವನ್ನು ಕೊಡುವವರೂ, **ದ್ವೇಷಭಾಜಾಂ**-ದ್ವೇಷ ಮಾಡುವ ದೈತ್ಯರಿಗೆ, **ಮೋಹಕ**-ಮೋಹವನ್ನುಂಟುಮಾಡುವವರೂ ಆದ, **ಗುರುತಮ**-ಅತ್ಯಂತ ಶ್ರೇಷ್ಠ ಗುರುಗಳಾದ, **ಶ್ರೀಮದಾನಂದತೀರ್ಥ**-ಹೇ ಮಧ್ವಾಚಾರ್ಯರೇ, **ತೇ**-ನಿಮ್ಮ, **ಪೂರ್ಣ....ಜಸೋಃ**—**ಪೂರ್ಣ**-ಪೂರ್ಣವಾದ, **ಜ್ಞಾನ**-ಜ್ಞಾನವೂ, **ಓಜಸೋಃ**-ಬಲವೂ ಉಳ್ಳ, **ವಪುಷೋಃ**-ದೇಹವನ್ನು ಧರಿಸಿದ ಹನುಮ-ಭೀಮ ಇಬ್ಬರ, **ಕ್ರೀಡಾಮಾತ್ರಮ್**-ಕೇವಲ ನಟನೆಯೇ ಆಗಿದೆ.

**ತಾತ್ಪರ್ಯ**—ಹೇ ಮಧ್ವಾಚಾರ್ಯರೇ, ದ್ವಾಪರಯುಗದಲ್ಲಿ ಭೀಮಸೇನನಾಗಿದ್ದ ನೀವು ಹನುಮಂತನನ್ನು ಭೇಟಿಯಾದಾಗ ಎಂಥಹ ನಟನೆ ಮಾಡಿಬಿಟ್ಟಿರಿ, ಸ್ವಾಮಿ? ಹನುಮನೂ ಭೀಮನೂ ಇಬ್ಬರೂ ಪೂರ್ಣಜ್ಞಾನಸ್ವರೂಪರೂ ಬಲಸ್ವರೂಪರೂ ಆದ ವಾಯುದೇವರ ಸರಿಸಮಾನಸ್ಕಂಧರೂಪಗಳೇ ಆಗಿದ್ದರೂ ಹನುಮಂತನೇ ಮಹಾ ಬಲಿಷ್ಠನೆಂದೂ ಭೀಮ ಅವನ ಮುಂದೆ ಏನೂ ಅಲ್ಲವೆಂದು ತೋರುವಂತೆ ಕ್ರೀಡೆಮಾಡಿಬಿಟ್ಟಿರಿ. ಭೀಮ ಸೌಗಂಧಿಕಾ ಪುಷ್ಪಗಳನ್ನು ತರಲು ಕುಬೇರನ ತೋಟಕ್ಕೆ ಹೊರಟಿದ್ದ. ದಾರಿಯಲ್ಲಿ ಹನುಮಂತ ಅಡ್ಡಲಾಗಿ ಮಲಗಿದ್ದ. ಭೀಮನಿಗೆ ಎಷ್ಟು ಪ್ರಯತ್ನಪಟ್ಟರೂ ಹನುಮಂತನ ಬಾಲವನ್ನೂ ಪಕ್ಕಕ್ಕೆ ಸಹ ಸರಿಸಲು ಆಗಲಿಲ್ಲ. ಆಮೇಲೆ ಹನುಮಂತ ಸಮುದ್ರ ದಾಟುವಾಗ ಧರಿಸಿದ್ದ ಬೃಹದ್ರೂಪವನ್ನು ತೋರಿಸಿ ಭೀಮನನ್ನು ಅಂಜಿಸಿಬಿಟ್ಟ ಎನ್ನುವಂತೆ ತೋರಿಸಿದಿರಿ. ಇದೆಲ್ಲ ನಿಜವೆಂದು ನಂಬುವ ನಿಮ್ಮ ದ್ವೇಷಿಗಳಿಗೆ ಪಾಪಸಾಧನೆ ಹೆಚ್ಚಾದರೆ ಇದೆಲ್ಲಾ ತೋರಿಕೆ, ಮೋಹನಾರ್ಥ ಎಂದು ತಿಳಿಯುವ ಭಕ್ತರಿಗೆ ನಿಮ್ಮ ಕ್ರೀಡೆಯನ್ನು ನೋಡಿ ಆನಂದೋದ್ರೇಕವೇ ಆಗುತ್ತದೆ.

**ಬಹ್ವೀಃ ಕೋಟೀರಟೀಕಃ ಕುಟಿಲಕಟುಮತೀ-ನುತ್ಕಟಾಟೋಪ-**
**ಕೋಪಾನ್**
**ದ್ರಾಕ್ ಚ ತ್ವಂ ಸತ್ವರತ್ವಾ-ಚ್ಛರಣದ ಗದಯಾ**
**ಪೋಥಯಾಮಾಸಿಥಾರೀನ್ ।**

---

**ಶ್ಲೋಕ ೨೮**—(ಬಹ್ವೀಃ) ಈ ಶ್ಲೋಕದಲ್ಲಿ ಭೀಮಸೇನದೇವರು ಮಣಿಮಂತನೇ ಮೊದಲಾದ ಅನೇಕ ದೈತ್ಯರನ್ನು ಸಂಹಾರಮಾಡಿ ದ್ರೌಪದಿಗೆ ಎರಡು ವಿಧ ಸೌಗಂಧಿಕಾಪುಷ್ಪಗಳನ್ನು ತಂದುಕೊಟ್ಟ ಪ್ರಸಂಗವನ್ನು (ಮಹಾ ಭಾರತದಲ್ಲಿ ಎರಡು ಬೇರೆ ಪ್ರಸಂಗಗಳಲ್ಲಿ ಹೇಳಿದ್ದನ್ನು) ಪೂರ್ವಾರ್ಧದಲ್ಲೂ ಉತ್ತರಾರ್ಧದಲ್ಲೂ ವರ್ಣಿಸಿ ನಮಸ್ಕಾರೋಕ್ತಿಯೊಡನೆ ಭೀಮಾವತಾರ ಮಹಿಮೆಯನ್ನು ಮುಗಿಸುತ್ತಾರೆ.

**ಪ್ರಧಾನವಾಕ್ಯ**—ಈ ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ಎರಡು ವಾಕ್ಯ ಗಳೂ ಉತ್ತರಾರ್ಧದಲ್ಲಿ ಮೂರು ವಾಕ್ಯಗಳೂ ಇವೆ—೧) ತ್ವಂ ಕಟುಮತೀನ್ ಅರೀನ್ ಅಟೀಕಃ = ನೀವು ಅನೇಕ ದುಷ್ಟರನ್ನು ಸಮೀಪಿಸಿದಿರಿ. ೨) (ತಾನ್) ಗದಯಾ ಪೋಥಯಾಮಾಸಿಥ ಚ = ಅವರನ್ನು ಗದೆಯಿಂದ ಸಂಹಾರಮಾಡಿದಿರಿ. ೩) ತಥಾ ಬಹ್ವೀಃ ಕೋಟೀಃ ಅರೀನ್ ಉನ್ಮಥ್ಯ, ಸ್ವಪ್ರಿಯಾಯೈ ಕುಸುಮಂ ಪ್ರಾಯಚ್ಛಃ-ಅದೇ ರೀತಿ ಇನ್ನೊಂದು ಸರಿ ಅನೇಕ ಕೋಟಿ ದೈತ್ಯರನ್ನು ಸಂಹರಿಸಿ, ದ್ರೌಪದಿಗೆ ಸೌಗಂಧಿಕಾಪುಷ್ಪವನ್ನು ತಂದುಕೊಟ್ಟಿರಿ. ೪) ತಸ್ಮೈ ತೇ ನಮಃ-ಅಂಥಾ ನಿಮಗೆ ನಮಸ್ಕಾರ.

**ಅನ್ವಯಾರ್ಥ**—(ಅನೇಕ ಪದಗಳನ್ನು ಆವೃತ್ತಿಮಾಡಿಕೊಂಡು ಯೋಜನೆ ಮಾಡಬೇಕು.) ೧) **ಶರಣದ**-ಮೊರೆಹೊಕ್ಕವರಿಗೆ ಆಶ್ರಯವನ್ನು ಕೊಡುವ, **ಪ್ರಾಣ**-ಎಲೈ ಮುಖ್ಯಪ್ರಾಣದೇವರೇ ! **ತ್ವಂ**-ಭೀಮಸೇನನಾಗಿದ್ದ ನೀವು, ಕುಟಿಲ....ಮತೀನ್—**ಕುಟಿಲ**-ವಕ್ರವೂ, **ಕಟು**-ಉಗ್ರವೂ ಆದ, **ಮತೀನ್**-ಬುದ್ಧಿಯುಳ್ಳ, ಉತ್ಕಟ....ಕೋಪಾನ್—**ಉತ್ಕಟ**-ಅತಿಯಾಗಿ, **ಆಟೋಪ**-ದರ್ಪವೂ (ಆಡಂಬರವೂ), **ಕೋಪಾನ್**-ಕೋಪವೂ ಉಳ್ಳಂಥಾ **ಅರೀನ್**-(ಲಕ್ಷಮಂದಿ) ದೈತ್ಯರನ್ನು, **ದ್ರಾಕ್**-ಬೇಗನೆ (ಅವರನ್ನು ಧ್ವಂಸ

**ಉನ್ಮಥ್ಯಾತಥ್ಯಮಿಥ್ಯಾ-ತ್ವವಚನ-ವಚನಾ-ನುತ್ಪಥಸ್ಥಾಂಸ್ತಥಾನ್ಯಾನ್**
**ಪ್ರಾಯಚ್ಛಃ ಸ್ವಪ್ರಿಯಾಯೈ ಪ್ರಿಯತಮಕುಸುಮಂ**
**ಪ್ರಾಣ ತಸ್ಮೈ ನಮಸ್ತೇ ॥ ೨೮ ॥**

---

ಮಾಡುತ್ತಾ ಲೆಕ್ಕಿಸದೆ ಶೀಘ್ರವಾಗಿ), **ಅಟೀಕಃ**-ಸಮೀಪಿಸಿದಿ. ೨) **ಸತ್ವರತ್ವಾತ್**-ಹೆಚ್ಚು ಪ್ರತಿಭೆಯೂ ವೇಗವೂ ಇದ್ದುದರಿಂದ, (ತಾನ್-) ಅವರೆಲ್ಲರನ್ನೂ, **ಗದಯಾ**-(ವಾದದಲ್ಲಿ) ಮಾತಿನಿಂದಲೂ (ಯುದ್ಧದಲ್ಲಿ) ಗದೆಯಿಂದಲೂ, **ಪೋಥಯಾಮಾಸಿಥ ಚ**-ಧ್ವಂಸಮಾಡಿಬಿಟ್ಟಿರಿ. ೩) **ತಥಾ**-ಅದೇರೀತಿಯೇ, **ಅತಥ್ಯ....ವಚನಾನ್**—ಅತಥ್ಯ-ಸುಳ್ಳೇ ಆದ, **ಮಿಥ್ಯಾ**-ಭ್ರಾಂತಿ ಎಂಬ, **ವಚನ**-ಮಾತನ್ನು, **ವಚನಾನ್**-ವಾದಿಸುತ್ತಿದ್ದ. **ಉತ್ಪಥಸ್ಥಾನ್**-ತಪ್ಪುದಾರಿಹಿಡಿದಿದ್ದ, **ಬಹ್ವೀಃ ಕೋಟೀಃ**-ಮುನ್ನೂರು ಕೋಟಿ ಸಂಖ್ಯಾಕರಾದ, **ಅನ್ಯಾನ್ ಅರೀನ್**-ಮಣಿಮಂತನೇ ಮೊದಲಾದ ಬೇರೆ ದೈತ್ಯರನ್ನು, **ಸತ್ವರತ್ವಾತ್**-ಹೆಚ್ಚು ಪ್ರತಿಭೆಯೂ ಹೆಚ್ಚು ಬಲವೂ ಇದ್ದುದರಿಂದ, **ಉನ್ಮಥ್ಯ**-ವಾದದಲ್ಲೂ ಸೋಲಿಸಿ ಯುದ್ಧದಲ್ಲೂ ಸಂಹಾರಮಾಡಿ, **ಪ್ರಿಯತಮಕುಸುಮಂ**-ಬಹಳ ಇಷ್ಟವಾದ (ಎರಡು ಬಗೆಯ) ಸೌಗಂಧಿಕಾ ಪುಷ್ಪಗಳನ್ನು, **ಸ್ವಪ್ರಿಯಾಯೈ**-ನಿಮಗೆ ಪ್ರಿಯತಮಳಾದ ದ್ರೌಪದೀದೇವಿಗೆ, **ಪ್ರಾಯಚ್ಛಃ**-ಕೊಟ್ಟಿರಿ. ೪) **ತಸ್ಮೈ**-ಅಂಥಾ, **ತೇ**-ನಿಮಗೆ, **ನಮಃ**-ನಮಸ್ಕಾರ.

**ತಾತ್ಪರ್ಯ**—ಹೇ ಭೀಮಸೇನ! ನಿಮ್ಮ ಪ್ರೇಯಸಿಯಾದ ದ್ರೌಪದೀದೇವಿಯು ಒಮ್ಮೆ ಗರುಡ ತಂದುಹಾಕಿದ ಹೊಂಗೆಂಪು ಬಣ್ಣದ ಸೌಗಂಧಿಕಾ ಪುಷ್ಪವನ್ನು ನೋಡಿ ಅದೇರೀತಿಯ ಪುಷ್ಪಗಳು ಬೇಕೆಂದು ಆಸೆಪಟ್ಟಳು. ಆ ಪುಷ್ಪಗಳು ಗಂಧಮಾದನ ಪರ್ವತದ ಮೇಲಿದ್ದ ಕುಬೇರನ ಹೂದೋಟದಲ್ಲಿದ್ದ ಕೊಳದಲ್ಲಿ ಬೆಳೆದಿದ್ದುವು. ಆ ಸ್ಥಳವೇ ದುರ್ಗಮವಾಗಿದ್ದುದಲ್ಲದೆ ಅದಕ್ಕೆ ಕುಬೇರನ ಸೇವಕರಾದ ಲಕ್ಷಮಂದಿ ದೈತ್ಯರು ಕಾವಲುಗಾರರಾಗಿದ್ದರು. ನೀವು ಅಲ್ಲಿಗೆ ಹೋದಕೂಡಲೆ ಅವರು ನಿಮ್ಮನ್ನು ಹುಲಿ-ಕರಡಿಗಳಾಗಿಯೂ ವಿಷಮಯ ಗಿಡಮರಗಳಾಗಿಯೂ ಪ್ರತಿಭಟಿಸಿದರು, ಹಾಗೆಯೇ ನಿಮ್ಮೊಡನೆ ವಾದಕ್ಕೆ ನಿಂತರು. ಅವರೆಲ್ಲರನ್ನೂ ವಾದದಲ್ಲೂ ಸೋಲಿಸಿದ್ದಲ್ಲದೆ ಗದೆ

ಯಿಂದಲೇ ಲಕ್ಷವಂದಿಯನ್ನೂ ನಾಶಮಾಡಿ ಕೊಳದಲ್ಲಿಳಿದು ಸ್ನಾನಮಾಡಿ ಬೇಕಾದಷ್ಟು ಹೂವುಗಳನ್ನು ತಂದು ಆ ದ್ರೌಪದಿಗೆ ಕೊಟ್ಟಿರಿ. ಇದೇರೀತಿ ಯಾಗಿಯೇ ಇನ್ನೊಮ್ಮೆ ಗಾಳಿಯಿಂದ ತೂರಿಕೊಂಡು ಪಂಚವರ್ಣದ ಮತ್ತೊಂದು ಬಗೆಯ ಸೌಗಂಧಿಕಾಪುಷ್ಪ ಹಾರಿಬಂತು. ಆ ಬಗೆಯ ಹೂಗಳೂ ಬೇಕೆಂದು ಆ ದ್ರೌಪದೀ ಆಸೆಪಟ್ಟಳು. ಆದರೆ ಈ ಪುಷ್ಪಗಳು ಕುಬೇರನ ರಾಜ ಧಾನಿಯಿಂದ ಅಲಕಾಪುರಿಯ ಹೂದೋಟದಲ್ಲಿದ್ದ ಕೊಳದಲ್ಲಿ ಬೆಳೆದಿದ್ದುವು. ಅವುಗಳನ್ನು ಕುಬೇರನ ಸೇವಕರಾದ ಮಣಿಮಂತನೇ ಮೊದಲಾದ ಮುನ್ನೂರು ಕೋಟಿ ದೈತ್ಯರು ಕಾಯುತ್ತಿದ್ದರು. ಹೇ ಭೀಮಸೇನ, ನೀವು ದುರ್ಗಮತರ ವಾದ ಆ ಕೊಳಕ್ಕೂ ಹೋಗಿ ಮುನ್ನೂರುಕೋಟಿ ಸಂಖ್ಯಾಕರಾಗಿದ್ದ ಅಷ್ಟು ಮಂದಿ ದೈತ್ಯರನ್ನೂ ವಾದದಲ್ಲೂ ಯುದ್ಧದಲ್ಲೂ ಜಯಿಸಿ ಅವರೆಲ್ಲರನ್ನೂ ಧ್ವಂಸಮಾಡಿ ಆ ಪಂಚವರ್ಣದ ಸೌಗಂಧಿಕಾಪುಷ್ಪಗಳನ್ನೂ ತಂದು ನಿಮ್ಮ ದಯಿತೆಗೆ ಕೊಟ್ಟಿರಿ. ಈ ಪ್ರಕಾರ ಭೀಮಾವತಾರಮಾಡಿ ಭೂಮಿಗೆ ಭಾರ ಭೂತರಾಗಿದ್ದ ಕೋಟ್ಯಾನುಕೋಟಿ ದೈತ್ಯರನ್ನು ಸಂಹಾರಮಾಡಿ ಭೂಭಾರ ವನ್ನು ಇಳುಹಿ ಶ್ರೀಕೃಷ್ಣರೂಪಿ ಭಗವಂತನ ರೂಪದ್ವಯದ ಕಾರ್ಯವನ್ನು ಸಾಧಿಸಿದಿರಿ. ಅಂಥಾ ನಿಮಗೆ ಅನಂತ ನಮಸ್ಕಾರ.

## ಭೀಮಾವತಾರ ನಿರೂಪಣ ಮಂಗಳ

ಶ್ರೀಕೃಷ್ಣಚರಿತಂ ಪುಣ್ಯಂ ಭೀಮಸೇನಯಶೋಽಮಲಮ್ ।
ವರ್ಣಿತಂ ವಿಷ್ಣುತೀರ್ಥೇನ ಪ್ರೀಯೇತಾಂ ತಾವುಭೌ ಮಯಿ ॥

ಅರ್ಥ :— ಯಾದವ ಕೃಷ್ಣ-ವ್ಯಾಸಕೃಷ್ಣ ಇಬ್ಬರ ಚರಿತ್ರೆಯೂ ಪುಣ್ಯಕರ ವಾದುದು. ಭೀಮಸೇನನ ಕೀರ್ತಿಯೂ ನಿರ್ಮಲವಾದುದು. ಅದನ್ನು ವಿಷ್ಣುತೀರ್ಥ ನಾಮಕನಾದ ನಾನು ಯಥಾಮತಿ ವರ್ಣಿಸಿದ್ದೇನೆ. ಅದರಿಂದ ಆ ಹರಿವಾಯು ಗಳಿಬ್ಬರೂ ನನ್ನಲ್ಲಿ ಪ್ರೀತರಾಗಲಿ.

**ದೇಹಾದುತ್ಕ್ರಾಮಿತಾನಾ-ಮಧಿಪತಿರಸತಾ-ಮಕ್ರಮಾದ್ ವಕ್ರಬುದ್ಧಿಃ**
**ಕ್ರುದ್ಧಃ ಕ್ರೋಧೈಕವಶ್ಯಃ ಕ್ರಿ(ಕೃ)ಮಿರಿವ ಮಣಿಮಾನ್**
**ದುಷ್ಕೃತೀ ನಿಷ್ಕ್ರಿಯಾರ್ಥಮ್ ।**

---

## 4) ಮಧ್ವಾವತಾರ ನಿರೂಪಣೆ (ಶ್ಲೋಕಗಳು ೨೯ರಿಂದ ೪೦)

ಅಥಾಂತ್ಯಾನ್ ದ್ವಾದಶ ಶ್ಲೋಕಾನ್ ಶ್ರೀಮಧ್ವಮಹಿಮಾಸ್ಥಿತಾನ್ ।
ವಿವೃಣೋಮಿ ಹರಿಪ್ರೀತ್ಯೈ ಸಂಕ್ಷೇಪೇಣ ಯಥಾಮತಿ ॥

ಅರ್ಥ :— ಕಡೆಯ ಹನ್ನೆರಡು ಶ್ಲೋಕಗಳಲ್ಲಿ (೨೯-೪೦) ಮಧ್ವಾವತಾರದ ಮಹಿಮೆ ಹೇಳಿದೆ. ಅದನ್ನು ಶ್ರೀಹರಿವಾಯುಗಳ ಪ್ರೀತ್ಯರ್ಥವಾಗಿ ಸಂಕ್ಷೇಪವಾಗಿ ವಿವರಿಸುತ್ತೇನೆ.

**ಪೀಠಿಕೆ**—ಶ್ಲೋಕ ೨೯ ರಿಂದ ೪೦ರವರೆಗಿನ ಹನ್ನೆರಡು ಶ್ಲೋಕಗಳು ಶ್ರೀಮನ್ಮಧ್ವಾಚಾರ್ಯರೆಂಬ ವಾಯುದೇವರ ಅವತಾರದ ವಿಚಾರವನ್ನೇ ನಿರೂಪಣೆಮಾಡುತ್ತವೆ. ಈ ೧೨ರ ಪೈಕಿ ಮೊದಲ ನಾಲ್ಕು ಶ್ಲೋಕಗಳು (೨೯—೩೨) ಮಧ್ವಾವತಾರಕ್ಕೆ ಉಪಕ್ರಮಣಿಕೆಯಂತಿವೆ. ಮುಂದಿನ ಮೂರು ಶ್ಲೋಕಗಳಲ್ಲಿ (೩೩-೩೫) ಪ್ರಾಸಂಗಿಕ ವಿಚಾರಗಳೇ ಇವೆ. ಆ ಮೇಲಿನ ನಾಲ್ಕು ಶ್ಲೋಕಗಳು (೩೬—೩೯) ಅವರು ಸೂತ್ರ ಭಾಷ್ಯಾದಿ ಗ್ರಂಥಗಳನ್ನು ರಚಿಸಿದ್ದನ್ನು ಪ್ರಸ್ತಾಪಿಸುತ್ತವೆ ಮತ್ತು ೪೦ನೆಯ ಶ್ಲೋಕ ಶ್ರೀಮದಾಚಾರ್ಯರಿಗೆ ವಂದನಾರ್ಪಣವೇ ಆಗಿವೆ. ಈಗ ೨೯ನೇ ಶ್ಲೋಕದಲ್ಲಿ ಮಧ್ವಾಚಾರ್ಯರ ಅವತಾರಕ್ಕೆ ಮಣಿಮಂತನು ಕಷ್ಟ (ಪಾಪಂ) ಶಾಸ್ತ್ರವನ್ನು ರಚಿಸಿದ್ದೇ ಕಾರಣೀಭೂತವಾಯಿತೆಂದು ಹೇಳುತ್ತಾರೆ.

**ಪ್ರಧಾನವಾಕ್ಯ**—ಮಣಿಮಾನ್ ಭೂಚಕ್ರಂ ಏತ್ಯ ಕಷ್ಟಶಾಸ್ತ್ರಂ ಚಕ್ರೇ—ಮಣಿಮಂತನು ಭೂಮಿಗೆ ಬಂದು ಕಷ್ಟಶಾಸ್ತ್ರವನ್ನು ರಚಿಸಿದನು.

**ಅನ್ವಯಾರ್ಥ**—**ಅಕ್ರಮಾತ್**-ಒಟ್ಟಿಗೆ, **ದೇಹಾತ್**-ದೇಹದಿಂದ, **ಉತ್ಕ್ರಾಮಿತಾನಾಂ**-ಸಂಹರಿಸಲ್ಪಟ್ಟ, **ಅಸತಾಂ**-ದುರ್ಜನರಲ್ಲಿ, **ಅಧಿಪತಿಃ**-ಮುಖಂಡನಾದ, **ವಕ್ರಬುದ್ಧಿಃ**-ಕೇಡಿಗ ಬುದ್ಧಿಯುಳ್ಳ, **ಕ್ರುದ್ಧಃ**-

**ಚಕ್ರೇ ಭೂಚಕ್ರಮೇತ್ಯ ಕ್ರಕಚಮಿವ ಸತಾಂ ಚೇತನಃ ಕಷ್ಟಶಾಸ್ತ್ರಂ**
**ದುಸ್ತರ್ಕಂ ಚಕ್ರಪಾಣೇರ್ ಗುಣಗಣವಿರಹಂ ಜೀವತಾಂ**
**ಚಾಧಿಕೃತ್ಯ ॥ ೨೯ ॥**

---

ಕುಪಿತನಾದ, **ಕ್ರೋಧೈಕವಶ್ಯಃ**-**ಕ್ರೋಧ-ಏಕ**-ಕೇವಲ ಕೋಪಕ್ಕೆ, **ವಶ್ಯಃ**-ವಶನಾದ, **ಕ್ರಿ(ಕೃ)ಮಿಃ ಇವ**-ಹುಳದಂತೆ, **ದುಷ್ಕೃತೀ**-ಒಳಗೊಳಗೇ ಕೊರೆಯುವ ಸ್ವಭಾವವುಳ್ಳ. **ಮಣಿಮಾನ್**-ಮಣಿಮಂತನೆಂಬ ದೈತ್ಯನು, **ನಿಷ್ಕ್ರಯಾರ್ಥಂ**-ಭೀಮನಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ, **ಭೂಚಕ್ರಂ**-ಭೂಮಂಡಲಕ್ಕೆ, **ಏತ್ಯ**-ಬಂದು, **ಚಕ್ರಪಾಣೇಃ**-ಶ್ರೀಮನ್ ನಾರಾಯಣನ, ಗುಣಗಣವಿರಹಂ—**ಗುಣ**—ಅನಂತ ಗುಣಗಳ, **ಗಣ**—ಸಮೂಹದಿಂದ, **ವಿರಹಂ**—ರಹಿತವಾದ, **ಜೀವತಾಂ ಚ**-ಜೀವನೇ ಆಗಿದ್ದಾನೆ, **ಅಧಿಕೃತ್ಯ**—ಎಂಬ ವಿಷಯವಾಗಿಯೂ, **ದುಸ್ತರ್ಕಂ**—ಜಟಿಲವಾದ ತರ್ಕದಿಂದ ಕೂಡಿದ, **ಸತಾಂ**—ಸಜ್ಜನರಿಗೆ, **ಕ್ರಕಚಂ ಇವ**—ಗರಗಸದಂತೆ ಇರುವ. **ಕಷ್ಟಶಾಸ್ತ್ರಂ**—ಮೋಹಕ ಶಾಸ್ತ್ರವನ್ನು, **ಚಕ್ರೇ**—ರಚಿಸಿದನು.

**ತಾತ್ಪರ್ಯ**—ಭೀಮಸೇನ ಎರಡನೇ ಆವರ್ತಿ ಸೌಗಂಧಿಕಾ ಪುಷ್ಪವನ್ನು ತರಲು ಹೋಗಿದ್ದಾಗ ಕೋಟಿಗಟ್ಲೆ ದೈತ್ಯರನ್ನು ಒಟ್ಟಿಗೆ ಸಂಹಾರಮಾಡಿಬಿಟ್ಟನಷ್ಟೆ. ಹಾಗೆ ಸಂಹೃತರಾದ ದೈತ್ಯರಿಗೆಲ್ಲಾ ಮಣಿಮಂತನೆಂಬುವನೇ ಮುಖಂಡನಾಗಿದ್ದ. ತನ್ನನ್ನು ಸೋಲಿಸಿ ಸಂಹರಿಸಿದ್ದರಿಂದ ಭೀಮನ ಮೇಲೆ ಕಿಚ್ಚುಕಾರುತ್ತಿದ್ದರೂ ಅವನ ಮುಂದೆ ಇವನ ಆಟ ಏನೂ ನಡೆಯುವಂತಿರಲಿಲ್ಲ. ಆದ್ದರಿಂದ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದು, ಕಲಿಯುಗವು ಪ್ರಬಲಿಸಿದಾಗ ಭೂಮಿಯಲ್ಲಿ ಸಂಕರನಾಗಿ ಹುಟ್ಟಿ ಒಂದು ಹೊಸ ಸಿದ್ಧಾಂತವನ್ನೇ ಸ್ಥಾಪಿಸಿದನು. ಅದರಂತೆ ಬ್ರಹ್ಮವೊಂದೇ ಸತ್ಯ, ಜೀವರೆಲ್ಲ ಬ್ರಹ್ಮಸ್ವರೂಪರೇ ಆಗಿದ್ದಾರೆಂದು ಪ್ರತಿಪಾದಿಸಿದ್ದರಿಂದ ವಿಷ್ಣುವಿನ ಅನಂತ ಕಲ್ಯಾಣಗುಣಗಳೂ ಮಾಯವಾದುವು, ವಿಷ್ಣುವೂ ಜೀವನೇ ಆಗಿಬಿಟ್ಟನು. ಈ ಸಿದ್ಧಾಂತವನ್ನು ಸ್ಥಾಪಿಸುವುದಕ್ಕೆ ಜಟಿಲವಾದ ಅನೇಕ ಕುತರ್ಕಗಳನ್ನೇ ಅವಲಂಬಿಸಿರುವುದರಿಂದ ಇದನ್ನು ಅರ್ಥಮಾಡಿಕೊಳ್ಳಲು ಬುದ್ಧಿಯು ಗರಗಸದಿಂದ ಕೊಯ್ದಂತೆ ಶಿಥಿಲವಾಗಿ ಹೋಗುತ್ತದೆ. (ಹೀಗೆ ಆ ಅತಸಿದ್ಧಾಂತಕ್ಕೆ

**ತದ್ದುಷ್ಪ್ರೇಕ್ಷಾನುಸಾರಾತ್ ಕತಿಪಯಕುನರೈ-**
**ರಾದೃತೋಽನ್ಯೈರ್ವಿಸೃಷ್ಟೋ**
**ಬ್ರಹ್ಮಾಽಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷ ಪಾಷಂಡವಾದಃ**

---

ವಶರಾಗಿ ಅನೇಕ ಸಜ್ಜನರು ದುರ್ಮಾರ್ಗಾವಲಂಬಿಗಳಾದರು. ಅದರಿಂದ ಖಿನ್ನರಾದ ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾದ ಶ್ರೀಹರಿಯು ವಾಯುದೇವರಿಗೆ ಆಜ್ಞೆಮಾಡಲು ಅವರು ಮಧ್ವಾಚಾರ್ಯರಾಗಿ ಅವತಾರ ಮಾಡಿದರೆಂಬ ಭಾಗವನ್ನು ಸೇರಿಸಿಕೊಳ್ಳಬೇಕು.)

**ಶ್ಲೋಕ ೩೦**—(ತದ್ದುಷ್) ಹಿಂದಿನ ಶ್ಲೋಕದಲ್ಲಿ ಪ್ರಸಕ್ತವಾದ 'ಕಷ್ಟಶಾಸ್ತ್ರ'ದ ಮುಖ್ಯಾಂಶಗಳನ್ನು ತಿಳಿಸಿ ಅದನ್ನು ವಾಯುದೇವರ ಮೂರನೆಯ ಅವತಾರವು ಹೇಗೆ ಖಂಡನೆಮಾಡಿ ಮೆರೆಯಿತೆಂದು ವರ್ಣಿಸುತ್ತಾರೆ.

**ಪ್ರಧಾನವಾಕ್ಯ**—೧) ಬ್ರಹ್ಮ ಅಹಂ, ಇದಂ ವಿತಥಂ ಇತಿ ಹಿ ಏಷಃ ಪಾಷಂಡವಾದಃ = ನಾನೇ ಬ್ರಹ್ಮ, ಜಗತ್ತೆಲ್ಲವೂ ಮಿಥ್ಯಾ ಎಂಬುದೇ ಆ ಮಣಿಮಂತನ ಪಾಷಂಡವಾದ, ೨) ಪವನ, ತದ್ಯುಕ್ತಿ.... ದಾಹದಕ್ಷಃ ತೇ ತೃತೀಯಃ ಅವತಾರಃ ವಿಜಯತೇ–ಹೇ ವಾಯುದೇವರೇ ! ಅವನ ಯುಕ್ತಿಗಳನ್ನು ಸುಟ್ಟು ಭಸ್ಮಮಾಡುವುದರಲ್ಲಿ ಸಮರ್ಥವಾದ ನಿಮ್ಮ ತೃತೀಯಾವತಾರವು ವಿಜಯಶಾಲಿಯಾಗಿದೆ.

**ಅನ್ವಯಾರ್ಥ—ಪವನ**–ಎಲೈ ವಾಯುದೇವರೇ, **ಅಹಂ**–ನಾನೇ, **ಬ್ರಹ್ಮ**–ಪರಬ್ರಹ್ಮನು, **ಅಹಂ**–ನಾನು, **ನಿರ್ಗುಣ**–ಗುಣರಹಿತನು, **ಇದಂ**–ಈ ಜಗತ್ತು, **ವಿತಥಂ**–ಸುಳ್ಳು ಅಥವಾ ಮಿಥ್ಯಾ, **ಇತಿ**–ಎಂಬ, **ಏಷ ಹಿ**–ಇದೇ, **ಪಾಷಂಡವಾದಃ** ಆ ಮಣಿಮಂತನ ಪಾಷಂಡವಾದ, **ತದ್ದುಷ್....ಸಾರಾತ್**–**ತತ್**–ಅವನ, **ದುಷ್ಪ್ರೇಕ್ಷಾ**-ದುರ್ಬುದ್ಧಿಯು, **ಅನುಸಾರಾತ್**–ಅನುಸರಣೆಯಿಂದ, **ಕತಿಪಯಕುನರೈಃ—ಕತಿಪಯ**–ಕೆಲವು ಮಂದಿ, **ಕುನರೈಃ**-ದುಷ್ಟಜನರಿಂದ, **ಆದೃತಃ**–ಆದರಿಸಲ್ಪಟ್ಟಿತು. **ಅನ್ಯೈಃ**–ಬೇರೆಯವರಿಂದ, **ವಿಸೃಷ್ಟಃ**–ತ್ಯಜಿಸಲ್ಪಟ್ಟಿತು. **ತದ್ಯುಕ್ತ್ಯಾಭಾಸ....ಧರಃ ಅಗ್ನಿಃ** (ಧರಾಗ್ನಿಃ)—**ತತ್**–ಅವನ, **ಯುಕ್ತಿ**-ಯುಕ್ತಿಯಂತೆ, '**ಆಭಾಸ**–ಕಾಣಿಸುವ ತರ್ಕಗಳ,

**ತದ್ವ್ಯಾಖ್ಯಾಭಾಸಜಾಲ-ಪ್ರಸರ-ವಿಷತರೂದ್-ದಾಹದಕ್ಷಪ್ರಮಾಣ-ಜ್ವಾಲಾಮಾಲಾಧರೋಽ(ಭರಾ)ಗ್ನಿಃ ಪವನ ವಿಜಯತೇ**
**ತೇಽವತಾರಸ್ತೃತೀಯಃ ॥ ೩೦ ॥**

---

**ಜಾಲ**-ಸಮೂಹದ, **ಪ್ರಸರ**-ವಿಸ್ತಾರವೆಂಬ, **ವಿಷತರು** ವಿಷವೃಕ್ಷಗಳನ್ನು, **ಉದ್ದಾಹ**-ಸುಟ್ಟು ಭಸ್ಮಮಾಡುವುದರಲ್ಲಿ, **ದಕ್ಷ**-ಸಮರ್ಥವಾದ, **ಪ್ರಮಾಣ**-ಶ್ರುತಿ ಸ್ಮೃತಿ ವಾಕ್ಯಗಳೆಂಬ, **ಜ್ವಾಲಾ**-ಉರಿಯ, **ಮಾಲಾ** ಸಾಲುಗಳನ್ನು, **ಧರಃ** (ಪಾಠಾಂ. ಧರ)-ಧರಿಸಿರುವ, **ಅಗ್ನಿಃ**-ಅಗ್ನಿ ಬೆಂಕಿಯಂತಿರುವ, **ತೇ**-ನಿಮ್ಮ, **ತೃತೀಯಃ**-ಮೂರನೆಯ, **ಅವತಾರಃ**-ಅವತಾರವು (ಮಧ್ವಾಚಾರ್ಯರು), **ವಿಜಯತೇ**-ಜಯಶೀಲವಾಗಿದ್ದಾರೆ

**ತಾತ್ಪರ್ಯ**—ಆ ಮಣಿಮಂತನ ಕಷ್ಟಶಾಸ್ತ್ರದಲ್ಲಿ—ಬ್ರಹ್ಮನು ನಿರ್ಗುಣ-ನಿರಾಕಾರ, ನಾನೇ ಆ ಬ್ರಹ್ಮ ಕಣ್ಣಿಗೆ ಕಾಣುವ ಈ ಸಕಲ ಜಗತ್ತೂ ಭ್ರಮೆ ಅಥವಾ ಮಿಥ್ಯಾ—ಎಂಬ ಮೂರೇ ಮುಖ್ಯ ಸಿದ್ಧಾಂತಗಳು. ಅವು ಅವನಂತೆಯೇ ಕುಟಿಲಬುದ್ಧಿಯುಳ್ಳ ಕೆಲವರಿಗೆ ಒಪ್ಪಿಗೆಯಾದ್ದರಿಂದ ಅವರು ಅವನ ಮತವನ್ನೇ ಒಪ್ಪಿಕೊಂಡರು. ಮಿಕ್ಕ ಕೆಲವರಿಗೆ ಅದು ಒಪ್ಪಿಗೆಯಾಗಲಿಲ್ಲ, ಅವರು ಆ ಮತವನ್ನು ತ್ಯಜಿಸಿದರು. ಆದರೆ, ಹೇ ಪವಮಾನ ಅವತಾರರಾದ ಮಧ್ವಾಚಾರ್ಯರೇ, ಆ ಮಣಿಮಂತ ತನ್ನ ಸಿದ್ಧಾಂತ ಸ್ಥಾಪನೆಗೆ ಹೆಣೆದಿರುವ ಕುತರ್ಕಗಳೆಂಬ ವಿಷವೃಕ್ಷಗಳಂತೆ ಘಾತಕಗಳಾಗಿದ್ದರೂ, ಕಾಡುಗಿಚ್ಚು ಹೇಗೆ ಎಂಥಾ ವಿಷವೃಕ್ಷವನ್ನಾದರೂ ಲೆಕ್ಕಿಸದೆ ದಹಿಸಿಹಾಕುವುದೋ, ಅದರಂತೆ ನೀವು ನಿಮ್ಮ ಗ್ರಂಥಗಳಲ್ಲಿ ಉದಹರಿಸಿರುವ ಶ್ರುತಿ-ಸ್ಮೃತಿ-ಪುರಾಣಾದಿ ಪ್ರಮಾಣವಾಕ್ಯಗಳು ಅವನ ಕುತರ್ಕಗಳನ್ನು ಖಂಡಿಸಿ ಧ್ವಂಸ ಮಾಡಿ ವಿಜೃಂಭಿಸಿ ಮೆರೆಯುತ್ತವೆ.

**ಶ್ಲೋಕ ೩೧**—(ಆಕ್ರೋಶಂತೋ) ಈ ಪ್ರಕಾರ ಶ್ರೀಮದಾಚಾರ್ಯರು ಸಕಲ ದುರ್ಮತಗಳನ್ನೂ ಖಂಡಿಸಿ, ಸ್ವಮತವನ್ನು ಸ್ಥಾಪಿಸುತ್ತಾ ಹೋಗಲು ಹತಾಶರಾದ ಮಾಯಾವಾದಿಗಳಿಗೆ ಹೇಗೆ ದಿಕ್ಕೇ ತೋರದಂತಾಯಿತೆಂಬುದನ್ನು ವರ್ಣಿಸುತ್ತಾರೆ.

**ಆಕ್ರೋಶಂತೋ ನಿರಾಶಾ ಭಯಭರ-ವಿವಶ-ಸ್ವಾಶಯಾಶ್ಛಿನ್ನದರ್ಪಾ**
**ವಾಶಂತೋ ದೇಶನಾಶ-ಸ್ತ್ವಿತಿ ಬತ ಕುಧಿಯಾಂ**
**ನಾಶಮಾಶಾ ದಶಾಽಽಶು ।**

---

**ಪ್ರಧಾನವಾಕ್ಯ**—ತ್ವದ್ವ್ಯಾಖ್ಯಾ ಸಿಂಹನಾದೇ ಮಾಯಿಗೋಮಾಯವಃ ಆಕ್ರೋಶಂತಃ ದಶ ಆಶಾಃ ಧಾವಂತಃ ದದೃಶಿರೇ–ನಿಮ್ಮ ಪ್ರವಚನವೆಂಬ ಸಿಂಹನಾದದ ಮುಂದೆ ಮಾಯಾವಾದಿಗಳೆಂಬ ನರಿಗಳು ಕಿರಿಚಿಕೊಳ್ಳುತ್ತಾ ಹತ್ತು ದಿಕ್ಕುಗಳಲ್ಲೂ ಓಡುತ್ತಿದ್ದುದನ್ನು ಎಲ್ಲರೂ ಕಂಡರು

**ಅನ್ವಯಾರ್ಥ**— ಹೇ ಮಧ್ವಾಚಾರ್ಯರೇ) ತ್ವದ್ವ್ಯಾಖ್ಯಾ ಸಿಂಹನಾದೇ—**ತ್ವತ್**–ನಿಮ್ಮ, **ವ್ಯಾಖ್ಯಾ**–ಪ್ರವಚನವೆಂಬ, **ಸಿಂಹನಾದೇ**–ಸಿಂಹನಾದವು ವಿಜೃಂಭಿಸುತ್ತಿರಲು, **ತೇ**–ಆ (ಪರಾಜಿತರಾದ), ಮಾಯಿಗೋಮಾಯವಃ—**ಮಾಯಿ**–ಮಾಯಾವಾದಿಗಳೆಂಬ, **ಗೋಮಾಯವಃ**–ನರಿಗಳು, ಅಶ್ಲೀಲಶೀಲಾಃ—**ಅಶ್ಲೀಲ**–ಹೀನವಾದ, **ಶೀಲಾಃ**–ಸ್ವಭಾವವುಳ್ಳ, ವಿತಥ....ಶಿವಾಃ—**ವಿತಥ**–ವ್ಯರ್ಥವಾದ, **ಶಪಥ**–ಪ್ರತಿಜ್ಞೆಯೂ, **ಶಾಪ**-ಶಾಪವೂ ಉಳ್ಳ, **ಅಶಿವಾಃ**–ಅಮಂಗಳರಾದ, ಶಾಂತಶೌರ್ಯಾ—**ಶಾಂತ**–ಅಡಗಿಹೋದ, **ಶೌರ್ಯಃ**–ಪರಾಕ್ರಮವುಳ್ಳವರೂ, **ಆಕ್ರೋಶಂತಃ**–(ನಮಗೆ ಏನು ಗತಿ ಎಂದು) ಕಿರಿಚಿಕೊಳ್ಳುತ್ತಾ, **ನಿರಾಶಾಃ**–ನಿರಾಶೆಯುಳ್ಳವರೂ, ಭಯ....ಸ್ವಾಶಯಾಃ—**ಭಯ**–ಹೆದರಿಕೆಯ, **ಭರ**–ಆಧಿಕ್ಯದಿಂದ (ಭಾರದಿಂದ) **ವಿವಶ**–ವಶತಪ್ಪಿದ (ಭಗ್ನವಾದ), **ಸ್ವ**–ತಮ್ಮ, **ಆಶಯಾಃ**–ಅಭಿಪ್ರಾಯ ಉಳ್ಳವರೂ, ಛಿನ್ನದರ್ಪಾಃ—**ಛಿನ್ನ**–ಭಗ್ನವಾದ, **ದರ್ಪಾಃ**–ಹೆಮ್ಮೆಯುಳ್ಳವರೂ, (ಕ) **ಕುಧಿಯಾಂ**–ಹಾಳುಬುದ್ಧಿಯುಳ್ಳ ನಮಗೆ, **ದೇಶನಾಶಃ ತು**–ಸ್ಥಾನಭ್ರಂಶವು (ಸ್ಥಾನಪಲ್ಲಟವು), **ಬತ**–ಆಯಿತಲ್ಲಾ ಅಯ್ಯೋ, **ಇತಿ**–ಎಂದು, **ನಾಶಂ**–ತಮ್ಮ ವಿನಾಶವನ್ನು, **ವಾಶಂತಃ**–ಹೇಳಿಕೊಂಡು ಮರುಗುತ್ತಾ, ಅಥವಾ (ಖ) **ಕುಧಿಯಾಂ**–ದುರ್ಬುದ್ಧಿಗಳಾದ ತಮ್ಮ, **ನಾಶಂ**–ನಾಶವನ್ನೇ, **ದೇಶನಾಶಃ ತು ಬತ**–ದೇಶವೇ ಹಾಳಾಗಿಹೋಯಿತು, **ಇತಿ**–ಎಂದು, **ವಾಶಂತಃ**–ಹೇಳಿಕೊಳ್ಳುತ್ತಾ, **ದಶ ಆಶಾಃ**-ಹತ್ತು ದಿಕ್ಕುಗಳಲ್ಲೂ, **ಆಶು**–

**ಧಾವಂತೋsಶ್ಲೀಲಶೀಲಾ ವಿತಥ-ಶಪಥ-ಶಾ-ಪಾಶಿವಾಃ**
**ಶಾಂತಶೌರ್ಯಾಸ್-**
**ತ್ವದ್ವ್ಯಾಖ್ಯಾಸಿಂಹನಾದೇ ಸಪದಿ ದದೃಶಿರೇ**
**ಮಾಯಿಗೋಮಾಯಸ್ತೇ || ೩೧ ||**

---

ಬೇಗನೆ, **ಧಾವಂತಃ**–ಓಡುವವರಾಗಿ, **ದದೃಶಿರೇ**–ಜನಗಳಿಂದ ನೋಡಲ್ಪಟ್ಟರು (ಓಡುತ್ತಿದ್ದುದು ಜನರಿಗೆ ಕಾಣಿಸಿತು ಎಂದರ್ಥ.)

**ತಾತ್ಪರ್ಯ**—ಶ್ರೀಮದಾಚಾರ್ಯರು ಎಲ್ಲ ಕಡೆಗಳಲ್ಲೂ ಪ್ರವಚನ ಮಾಡುತ್ತಾ ದುರ್ಮತಗಳನ್ನು ಖಂಡಿಸುತ್ತಾ ತಮ್ಮ ಸಿದ್ಧಾಂತಗಳನ್ನು ಪ್ರಚಾರಮಾಡುತ್ತಾ ಹೋದರು. ಅವರನ್ನು ಎದುರಿಸಿ ವಾದದಲ್ಲಿ ಗೆಲ್ಲುವ ಶಕ್ತಿ ಎದುರು ಪಕ್ಷದ ಯಾರಲ್ಲೂ ಇರಲಿಲ್ಲ. ಆದರಿಂದ ಮಾಯಾವಾದಿಗಳ ಆಶೆಗಳೆಲ್ಲವೂ ಕುಸಿದುಬಿದ್ದುವು. ಅವರ ಸೊಕ್ಕೆಲ್ಲಾ ಅಡಗಿಹೋಯಿತು. ಆದರೆ ಅವರು ಸ್ವಭಾವತಃ ಹೀನಜನರಾದ್ದರಿಂದ ಆಚಾರ್ಯರನ್ನು ಬೈದು ಶಪಿಸಿದರು. ಕೊನೆಗೆ, ಸಿಂಹದ ಗರ್ಜನೆಯನ್ನು ಕೇಳಿ ಆ ಸಿಂಹವನ್ನು ಎದುರಿಸಲಾರದೆ ನರಿಗಳು 'ಹೋ ಹೋ' ಎಂದು ಕೂಗುತ್ತಾ ದಿಕ್ಕು ದಿಕ್ಕಿಗೆ ಪಲಾಯನ ಮಾಡುವಂತೆ ಮಾಯಾವಾದಿ ಮತದ ಪ್ರತಿವಾದಿಗಳೂ ಕಂಗೆಟ್ಟು 'ಇನ್ನು ನಮಗೇನು ಗತಿ ? ಎಲ್ಲಿ ಹೋಗೋಣ ?' ಎಂದು ಕಿರಿಚಿಕೊಳ್ಳುತ್ತಾ ತಾವು ಹಾಳಾದುದನ್ನೇ ಇಡೀ ದೇಶವೇ ನಾಶವಾಯಿತೆಂದು ಹೇಳುತ್ತಾ ಸಿಕ್ಕಿದ ಕಡೆ ಓಡಬೇಕಾಗಿ ಬಂತು.

**ಶ್ಲೋಕ ೩೨**—(ತ್ರಿಷ್ವಪಿ) ಈ ಅವತಾರದಲ್ಲಿ ಮಾತ್ರವಲ್ಲ, ಹನುಮ-ಭೀಮ-ಮಧ್ವ ಈ ಮೂರು ಅವತಾರಗಳಲ್ಲೂ ಎಂಥೆಂಥ ಕಷ್ಟಗಳು ಬಂದರೂ ನೀವು ಕಿಂಚಿತ್ತೂ ನಿರ್ವಿಕಾರ ಹೊಂದಲಿಲ್ಲವೆಂದು ಸ್ತುತಿಸುತ್ತಾರೆ.

**ಪ್ರಧಾನವಾಕ್ಯ**—೧) ತ್ರಿಷು ಅವತಾರೇಷು ಅರಿಭಿಃ ಹಿಂಸಿತಃ ನಿರ್ವಿಕಾರಃ–ಮೂರು ಅವತಾರಗಳಲ್ಲೂ ಶತ್ರುಗಳಿಂದ ಹಿಂಸಿಸಲ್ಪಟ್ಟರೂ ನೀವು ನಿರ್ವಿಕಾರರು. ೨) ಸುಜನಂ ಸುಖಯಸಿ–ಸಜ್ಜನರನ್ನು ಸಂತೋಷಪಡಿಸುವಿರಿ. ೩) ಯಸ್ಯ ತ್ರಿಧಾಮಾ ತ್ರಾತಾ, ಶಂಕರಾದ್ಯಾಃ ಕಿಂಕರಾಃ, ಅತ್ರ ಕಿಂ

**ತ್ರಿಷ್ವಪ್ಯೇವಾವತಾರೇ-ಷ್ವರಿಭಿರಪಘೃಣಂ ಹಿಂಸಿತೋ ನಿರ್ವಿಕಾರಃ**
**ಸರ್ವಜ್ಞಃ ಸರ್ವಶಕ್ತಿಃ ಸಕಲಗುಣಗಣಾ-ಪೂರ್ಣರೂಪ ಪ್ರಗಲ್ಭಃ**

---

ಚಿತ್ರಮ್-ಯಾರಿಗೆ ಶ್ರೀವಿಷ್ಣುವೇ ಸಂರಕ್ಷಕನಾಗಿದ್ದಾನೋ, ರುದ್ರಾದಿಗಳೇ ಸೇವಕರಾಗಿದ್ದಾರೋ ಅಂಥಾ ನಿಮ್ಮಲ್ಲಿ ಇದು ಏನು ಆಶ್ಚರ್ಯ ?

**ಅನ್ವಯಾರ್ಥ—ದೇವ**-ಹೇ ಮುಖ್ಯಪ್ರಾಣದೇವರೇ, ೧) **ತ್ರಿಷು ಅಪಿ ಅವತಾರೇಷು**-ಹನುಮ-ಭೀಮ-ಮಧ್ವ ಎಂಬ ಮೂರು ಅವತಾರಗಳಲ್ಲೂ, **ಅರಿಭಿಃ**-ಶತ್ರುಗಳಿಂದ, **ಅಪಘೃಣಂ**-ನಿರ್ದಯವಾಗಿ, **ಹಿಂಸಿತಃ**-ಪೀಡಿಸಲ್ಪಟ್ಟರೂ, **ನಿರ್ವಿವಾದಃ ಏವ**-ಯಾವ ವಿಕಾರವನ್ನೂ ಹೊಂದದೆ ಸ್ವಾಭಾವಿಕವಾಗಿಯೇ ಇದ್ದಿರಿ. ೨) **ಸರ್ವಜ್ಞಃ**-ಸಮಸ್ತವನ್ನೂ ಬಲ್ಲವರೂ, **ಸರ್ವಶಕ್ತಿಃ**-ಸಮಸ್ತವನ್ನೂ ಮಾಡುವ ಸಾಮರ್ಥ್ಯವುಳ್ಳವರೂ, ಸಕಲ.... ಪ್ರಗಲ್ಭಃ—**ಸಕಲ**-ಸಮಸ್ತವಾದ ಜ್ಞಾನಬಲವೇ ಮೊದಲಾದ, **ಗುಣ**-ಗುಣಗಳ, **ಗಣ**-ಸಮೂಹದಿಂದ, **ಆಪೂರ್ಣ**-ತುಂಬಿದವರೂ, **ಪ್ರಗಲ್ಭಃ**-ಪ್ರತಿಭಾಶಾಲಿಗಳೂ ಆದ, **ಸ್ವಚ್ಛಃ**-ಪಾಪಲೇಪವಿಲ್ಲದ ನಿಷ್ಕಲ್ಮಷರೂ, **ಸ್ವಚ್ಛಂದಮೃತ್ಯುಃ**-ಸ್ವೇಚ್ಛಾಮರಣವುಳ್ಳ ನೀವು, **ಸುಜನಂ**-ಸಜ್ಜನರನ್ನು, **ಸುಖಯಸಿ**-ಸಂತೋಷಪಡಿಸುತ್ತೀರಿ. ೩) **ಯಸ್ಯ**-ಯಾವ ನಿಮಗೆ, **ತ್ರಿಧಾಮಾ**-ಅನಂತಾಸನ, ವೈಕುಂಠ, ಶ್ವೇತದ್ವೀಪಗಳೆಂಬ ಲೋಕತ್ರಯಗಳಲ್ಲಿ ನೆಲೆಸಿರುವ ಶ್ರೀವಿಷ್ಣುವು, **ತ್ರಾತಾ**-ಸಂರಕ್ಷಕನಾಗಿದ್ದಾನೋ, **ಉತ**-ಮತ್ತು, **ಜಗತ್**-ಸಮಸ್ತಲೋಕವೂ, **ವಶಗಂ**-ವಶವರ್ತಿಯಾಗಿದೆಯೋ, **ಶಂಕರಾದ್ಯಾಃ**-ರುದ್ರೇಂದ್ರಾದಿ ಸಕಲ ದೇವತೆಗಳೂ, **ಕಿಂಕರಾಃ**-ಸೇವಕರಾಗಿದ್ದಾರೋ, **ಅತ್ರ**-ಅಂಥಾ ನಿಮ್ಮಲ್ಲಿ, **ಅತ್ರ** (ಎಂದು ಪುನಃ ಆವೃತ್ತಿಮಾಡಿಕೊಳ್ಳಬೇಕು) **ಈ** ವಿಷಯದಲ್ಲಿ, **ಕಿಂ ಚಿತ್ರಮ್**-ಆಶ್ಚರ್ಯವೇನಿದೆ ?

**ತಾತ್ಪರ್ಯ**—ಹೇ ವಾಯುದೇವರೇ, ನೀವು ಹನುಮ-ಭೀಮ-ಮಧ್ವ ಎಂಬ ಮೂರು ಅವತಾರಗಳಲ್ಲೂ ನಾನಾಬಗೆಯ ಶತ್ರುಗಳಿಂದ ಪೀಡಿಸಲ್ಪಟ್ಟರೂ ನೀವು ಯಾವುದಕ್ಕೂ ಜಗ್ಗದೆ ಒಂದೇ ರೀತಿಯಿದ್ದು ಸಜ್ಜನರನ್ನು ಕಾಪಾಡುತ್ತಲೇ ಬಂದಿದ್ದೀರಿ. ನೀವು ಸ್ವಯಂ ಸರ್ವಶಿಖಾಮಣಿಗಳು, ಸರ್ವ

**ಸ್ವಚ್ಛಃ ಸ್ವಚ್ಛಂದಮೃತ್ಯುಃ ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ**
**ತ್ರಾತಾ ಯಸ್ಯ ತ್ರಿಧಾಮಾ ಜಗದುತ ವಶಗಂ ಕಿಂಕರಾಃ**
**ಶಂಕರಾದ್ಯಾಃ ॥ ೩೨ ॥**

---

ಸಮರ್ಥರು. 'ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿ-ಸ್ಥಿತಿ-ಪ್ರಾಣಬಲೇಷು ಯೋಗೇ' ಎಂಬಂತೆ ಜ್ಞಾನ-ಬಲ-ವೈರಾಗ್ಯ-ಭಕ್ತಿ-ಧೈರ್ಯ-ಶೌರ್ಯ ಇತ್ಯಾದಿ ಸಕಲ ಸದ್ಗುಣಗಳೂ ನಿಮ್ಮಲ್ಲಿ ಪರಿಪೂರ್ಣವಾಗಿ ತುಂಬಿವೆ. ಪಾಪಲೇಪವಿಲ್ಲದ ಪರಿಶುದ್ಧಾತ್ಮರು. ಸ್ವೇಚ್ಛಾಮರಣವುಳ್ಳವರು. ಅದಕ್ಕೂ ಹೆಚ್ಚಾಗಿ ಅನಂತಾಸನ ಶ್ವೇತದ್ವೀಪ-ವೈಕುಂಠಗಳೆಂಬ ತ್ರಿಸ್ಥಾನಗಳಲ್ಲಿ ಮೆರೆಯುವ ಸಾಕ್ಷಾತ್-ವಿಷ್ಣುವೇ ನಿಮ್ಮ ರಕ್ಷಕನಾಗಿದ್ದಾರೆ. ಸ್ಥಾವರ ಜಂಗಮಾತ್ಮಕವಾದ ಸಕಲ ಜಗತ್ತೂ ನಿಮ್ಮ ಅಧೀನವಾಗಿದೆ. ಅದಕ್ಕೂ ಮೇಲಾಗಿ ರುದ್ರೇಂದ್ರಾದಿ ದೇವತೆಗಳೇ ನಿಮಗೆ ಸೇವಕರಾಗಿರುವಾಗ ನೀವು ಯಾವ ಶತ್ರುವಿಗೂ ಹೆದರದೆ ನಿರ್ವಿಕಾರರಾಗಿರುವುದರಲ್ಲಿ ಆಶ್ಚರ್ಯವೇನಿದೆ ?

**ಶ್ಲೋಕ ೩೩**—(ಉದ್ಯನ್) ಶ್ರೀಮದಾಚಾರ್ಯರ ಮುಖಾವಲೋಕನವೇ ಸಕಲಾಭೀಷ್ಟಸಾಧನವಾಗಿರುವುದರಿಂದ ಅವರ ಮುಖಚಂದ್ರಬಿಂಬದ ದರ್ಶನ ಎಂದಿಗಾದೀತೆಂದು ತವಕಪಡುತ್ತಾರೆ.

**ಪ್ರಧಾನ ವಾಕ್ಯ**—ಶ್ರೀಮದಾನಂದತೀರ್ಥ ! (ತವ) ವಕ್ತ್ರೇಂದುಬಿಂಬಂ ಕದಾ ನು ಸಂದ್ರಕ್ಷ್ಯೇ ? ಶ್ರೀಮದಾಚಾರ್ಯರೇ, ನಿಮ್ಮ ಮುಖದ ಸಂದರ್ಶನವು ನನಗೆ ಎಂದಿಗೆ ಲಭಿಸೀತು ?

**ಅನ್ವಯಾರ್ಥ**—**ನಿತ್ಯದ**–ನಿತ್ಯವಾದ ಸುಖವನ್ನು ಕೊಡುವ, **ಆನಂದ-ತೀರ್ಥ**–ಮಧ್ವಾಚಾರ್ಯರೇ, ಉದ್ಯನ್....ಪೀಯಮಾನಂ—**ಉದ್ಯನ್**–ಉತ್ಪನ್ನವಾಗುತ್ತಿರುವ, **ಮಂದಸ್ಮಿತ**–ಮಂದಹಾಸದ, **ಶ್ರೀ**–ಕಾಂತಿಯಿಂದ, **ಮೃದು**–ಮೃದುವಾಗಿಯೂ, **ಮಧು**–ಜೇನುತುಪ್ಪದಂತೆ, **ಮಧುರ**–ಸಿಹಿಯಾದ (ರುಚಿಯಾದ), **ಆಲಾಪ**–ಸಂಭಾಷಣೆಯೆಂಬ, **ಪೀಯೂಷ**–ಅಮೃತದ, **ಧಾರಾ**–ಧಾರೆಯ, **ಪೂರ**–ಪ್ರವಾಹದಲ್ಲಿ, **ಆಸೇಕ**–ಸ್ನಾನಮಾಡಿದ್ದರಿಂದ, **ಉಪಶಾಂತ**–ನಷ್ಟವಾದ, **ಅಸುಖ**–ದುಃಖವುಳ್ಳ, **ಸುಜನ**–ಸಜ್ಜನರ,

**ಉದ್ಯನ್ಮಂದಸ್ಮಿತಶ್ರೀ-ಮೃದುಮಧು-ಮಧುರಾ-ಲಾಪ**
**ಪೀಯೂಷಧಾರಾ-**
**ಪೂರಾಸೇಕೋಪಶಾಂತಾ-ಸುಖಸುಜನಮನೋ-**
**ಲೋಚನಾಪೀಯಮಾನಮ್ ।**
**ಸಂದ್ರಕ್ಷ್ಯೇ ಸುಂದರಂ ಸಂ-ದುಹದಿಹ ಮಹದಾ-ನಂದಮಾನಂದತೀರ್ಥ**
**ಶ್ರೀಮದ್ವಕ್ತ್ರೇಂದುಬಿಂಬಂ ದುರಿತನುದುದಿತಂ**
**ನಿತ್ಯದಾsಹಂ ಕದಾನು ॥ ೩೩ ॥**

---

**ಮನಃ**–ಮನಸ್ಸೆಂಬ, **ಲೋಚನ**–ಕಣ್ಣುಗಳಿಂದ, **ಆಪೀಯಮಾನಂ**–ಕುಡಿಯಲ್ಪಡುತ್ತಿರುವ (ಎಂದರೆ ನೋಡಲ್ಪಡುತ್ತಿರುವ), **ಸುಂದರಂ**–ಸುಂದರವಾದ, **ಮಹತ್**–ಪೂಜ್ಯವಾದ, **ಇಹ**–ಇಲ್ಲಿ (ಎಂದರೆ ಸೇವಕ ಜನರಲ್ಲಿ, ಸಜ್ಜನರಲ್ಲಿ ಅಥವಾ ಅಧಿಕಾರಿ ವರ್ಗದಲ್ಲಿ), **ಆನಂದಂ**–ಸ್ವರೂಪಾನಂದವನ್ನು (ಅಥವಾ 'ಮಹತ್' ಎಂಬುದನ್ನು 'ಆನಂದಂ' ಜೊತೆಯೇ ಸೇರಿಸಿದರೆ—**ಮಹದಾನಂದಂ**- ಪೂರ್ಣಾನಂದವನ್ನು), **ಸಂದುಹತ್**–ಕರೆಯು (ಸುರಿಸು) ತ್ತಿರುವ, (ನಿತ್ಯದಾ–ಶಾಶ್ವತವಾಗಿ), **ದುರಿತನುತ್**–ಪಾಪಗಳನ್ನು (ಅನಿಷ್ಟಗಳನ್ನು) ಓಡಿಸುವಂಥಾ, **ಉದಿತಂ**–ಸರ್ವದಾ ಪ್ರಸನ್ನವಾದ, **ಶ್ರೀಮತ್**–ಕಾಂತಿಯುಳ್ಳ, ವಕ್ರೇಂದುಬಿಂಬಂ—**ವಕ್ತ್ರ**-ನಿಮ್ಮ ಮುಖವೆಂಬ, **ಇಂದು**–ಚಂದ್ರನ, **ಬಿಂಬಂ**–ಮಂಡಲವನ್ನು, (ನಿತ್ಯದಾ–ನಿತ್ಯದಲ್ಲೂ), **ಕದಾನು**–ಎಂದಿಗೆ, **ಸಂದ್ರಕ್ಷ್ಯೇ**- ಪ್ರತ್ಯಕ್ಷವಾಗಿ ನೋಡುವೆನು?

**ತಾತ್ಪರ್ಯ**—ಹೇ ಮಧ್ವಾಚಾರ್ಯರೇ, ನಿಮ್ಮ ಮುಖಕಮಲವು ಹುಣ್ಣಿಮೆಯ ಚಂದ್ರನಂತೆ ಸಕಲ ತಾಪತ್ರಯಗಳನ್ನೂ ಪರಿಹಾರ ಮಾಡುವುದಲ್ಲದೆ ಮನಸ್ಸಿಗೆ ಆಹ್ಲಾದಕರವೂ ಆಗಿದೆ. ಅದರಿಂದ ಅದನ್ನು ಎಷ್ಟು ನೋಡಿದರೂ ಮನಸ್ಸು ದಣಿಯುವುದೇ ಇಲ್ಲ. ಅದೇ ರೀತಿ ನಿಮ್ಮ ಮುಖದಿಂದ ಹೊರಡುವ ಮೃದು-ಮಧುರವೂ, ಹಿತ-ಮಿತವೂ, ಸುಧಾರಸಸದೃಶವೂ ಆದ ಸವಿನುಡಿಗಳನ್ನು ಕೇಳುತ್ತಾ ಹೋದರೆ ಅಮೃತ ಪ್ರವಾಹದಲ್ಲಿ ಮಿಂದು ಬಂದವರಂತೆ ನಮಗೆ ಸಕಲ ಸಂತಾಪವೂ ನಿವಾರಣೆಯಾಗಿ ಹರ್ಷೋದ್ರೇಕವಾಗುತ್ತದೆ. ಅಂಥಾ ನಿಮ್ಮ ಮುಖಕಮಲವನ್ನು ಸದಾ ನೋಡುತ್ತಿರುವ ಹಾಗೂ ನಿಮ್ಮ ಅಮೃತವಾಣಿಯನ್ನು ನಿರಂತರವಾಗಿ ಕೇಳುವ ಯೋಗವು ನನಗೆ ಯಾವಾಗ ಲಭಿಸುವುದೋ ಎಂದು ನಾನು ಹಾತೊರೆಯುತ್ತಿದ್ದೇನೆ.

**ಪ್ರಾಚೀನಾಚೀರ್ಣ ಪುಣ್ಯೋ-ಚ್ಚಯಚತುರತರಾ-ಚಾರತಶ್ಚಾರು ಚಿತ್ತಾ (ನ್)**
**ನ(ಅ)ತ್ಯುಚ್ಚಾಂ ರೋಚಯಂತೀಂ ಶ್ರುತಿಚಿತ-ವಚನಾಂ-ಛ್ರಾವಕಾಂಶ್ಚೋದ್ಯಚುಂಚೂನ್ ।**

---

## ಪ್ರಾಸಂಗಿಕ ಎರಡು ವಿಚಾರಗಳು (ಶ್ಲೋಕ ೩೪-೩೫)

**ಶ್ಲೋಕ ೩೪—ಆಚಾರ್ಯರ ವ್ಯಾಖ್ಯಾನ ವೈಭವ (ಪ್ರಾಚೀನಾ-ಚೀರ್ಣ)** ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರ ಗ್ರಂಥವನ್ನು ಓದುವ ಯೋಗ ಬರಬೇಕಾದರೆ ಎಷ್ಟೋ ಜನ್ಮಗಳ ಪುಣ್ಯರಾಶಿಗಳು ಪರಿಪಕ್ವವಾಗಿರ ಬೇಕೆಂದು ಹೇಳುತ್ತಾರೆ.

**ಪ್ರಧಾನ ವಾಕ್ಯ**—(ಹೇ) ಸಚ್ಛಾಸ್ತ್ರಕರ್ತಃ, ತೇ ವ್ಯಾಖ್ಯಾಂ ಅಸ್ಮಾಂಶ್ಚ ಕಿಂಚಿತ್ ಶ್ರಾವಯ = ಸಚ್ಛಾಸ್ತ್ರಗಳನ್ನು ಬರೆದ ಹೇ ಆಚಾರ್ಯರೇ, ನಿಮ್ಮ ವ್ಯಾಖ್ಯಾನವನ್ನು ನಮಗೂ ಸ್ವಲ್ಪ ಶ್ರವಣಮಾಡಿಸಿರಿ.

**ಅನ್ವಯಾರ್ಥ—ಉಚಿತ**-ಸಮರ್ಥರಾದ ಅಥವಾ ಯೋಗ್ಯರಾದ, ಸಚ್ಛಾಸ್ತ್ರಕರ್ತಃ—**ಸತ್**-ನಿರ್ದುಷ್ಟವಾದ, **ಶಾಸ್ತ್ರ**-ಶಾಸ್ತ್ರಗ್ರಂಥಗಳನ್ನು, **ಕರ್ತಃ**-ರಚನೆಮಾಡಿದ, **ಮಹಾಚಾರ್ಯ**-ಹೇ ಮಧ್ವಾಚಾರ್ಯರೇ (ಅಥವಾ ಸಚ್ಛಾಸ್ತ್ರಕರ್ತಃ ಉಚಿತ ಮಹಾಚಾರ್ಯ ಎಂದು ಎರಡೇ ಪದವಾಗಿಯೂ ಅನ್ವಯಿಸಬಹುದು, ಅರ್ಥ ಹಿಂದಿನಂತೆಯೇ). **(ಕ) ಪ್ರಾಚೀನಾ.... ಚಿತ್ತಾನ್—ಪ್ರಾಚೀನ**-ಹಿಂದಿನ ಜನ್ಮಗಳಲ್ಲಿ, **ಆಚೀರ್ಣ**-ಆಚರಿಸಿದ, **ಪುಣ್ಯ**-ಪುಣ್ಯಗಳ, **ಉಚ್ಚಯ**-ಆಧಿಕ್ಯದಿಂದ (ಅಥವಾ ರಾಶಿಗಳಿಂದ), **ಚತುರ-ತರ**-ಬಹಳ ನಾಜೂಕಾದ (ಶಾಸ್ತ್ರವಿಹಿತವಾದ ಎಂದರ್ಥ), **ಆಚಾರತಃ**-ಅನುಷ್ಠಾನದಿಂದ, **ಚಾರು**-ಪರಿಶುದ್ಧವಾದ, **ಚಿತ್ತಾನ್**-ಮನಸ್ಸುಳ್ಳ, (ಖ) ಶ್ರುತಿಚಿತವಚನಾನ್—**ಶ್ರುತಿ**-ವೇದಾದಿ ಗ್ರಂಥಗಳಿಂದ, **ಚಿತ**-ಸಂಬದ್ಧವಾದ, **ವಚನಾನ್**-ಮಾತುಗಳುಳ್ಳ, (ಗ) **ಚೋದ್ಯ.... ಚುಂಚೂನ್—ಚೋದ್ಯ**-ಪ್ರಶ್ನೆಗಳನ್ನು (ಸಂಶಯಗಳನ್ನು) ಕೇಳುವುದರಲ್ಲಿ, **ಚುಂಚೂನ್**-ದಕ್ಷರಾದ, (ಘ) **ಶ್ರಾವಕಾನ್**-ಶ್ರೋತೃಗಳಾದ ಶಿಷ್ಯರಿಗೆ,

**ವ್ಯಾಖ್ಯಾಮುತ್ಖಾತದುಃಖಾಂ ಚಿರಮುಚಿತ ಮಹಾ-ಚಾರ್ಯ**
**ಚಿಂತಾರತಾಂಸ್ತೇ**
**ಚಿತ್ರಾಂ ಸಚ್ಛಾಸ್ತ್ರಕರ್ತಶ್ ಚರಣಪರಿಚರಾನ್**
**ಛ್ರಾವಯಾಸ್ಮಾಂಶ್ಚ ಕಿಂಚಿತ್ || ೩೪ ||**

---

**ಚಿರಂ**–ಚೆನ್ನಾಗಿ, ೧) **ರೋಚಯಂತೀಂ**–ಹಿತವಾಗಿರುವ (ರುಚಿಯಾಗಿ ಕಾಣುವ), ೨) **ಅತ್ಯುಚ್ಚಾಂ**–ಉನ್ನತವುಟ್ಟಕ್ಕೆ ಸೇರಿದ (ಅತಿ ಪ್ರೌಢವಾದ), ೩) (ಶ್ರುತಿಚಿತವಚನಾಂ ಎಂಬುದನ್ನು 'ವ್ಯಾಖ್ಯಾಂ'ಗೂ ಅನ್ವಯಿಸಬಹುದು–**ಶ್ರುತಿ**–ಅನೇಕ ಶ್ರುತಿಸ್ಮೃತಿಗಳಿಂದ, **ಚಿತ**–ಆಚರಿಸಿದ (ಉದ್ಧರಿಸಿದ), **ವಚನಾಂ**–ಪ್ರಮಾಣವಾಕ್ಯಗಳುಳ್ಳ), ೪) ಉತ್ಖಾತದುಃಖಾಂ—**ಉತ್ಖಾತ**–ಬುಡವುಟ್ಟ ಕಿತ್ತುಹಾಕಲ್ಪಟ್ಟ, **ದುಃಖಾಂ**–ದುಃಖವುಳ್ಳ, ೫) **ಚಿತ್ರಾಂ**–ಅದ್ಭುತವಾದ, **ತೇ**–ನಿಮ್ಮ, ೬) **ವ್ಯಾಖ್ಯಾಂ**–ಪ್ರವಚನವನ್ನು, (**ಚಿರಂ** ಎಂದು ಪುನಃ ಅನ್ವಯಿಸಿಕೊಳ್ಳಬೇಕು—ಬಹುಕಾಲದಿಂದಲೂ, **ತೇ** ಎಂಬುದನ್ನೂ ಅನ್ವಯಿಸಿಕೊಳ್ಳಬೇಕು—ನಿಮ್ಮ), **ಚಿಂತಾಪರಾನ್**-ಧ್ಯಾನಾಸಕ್ತರಾದ, ಚರಣಪರಿಚರಾನ್—**ಚರಣ**–ಪಾದಗಳ, **ಪರಿಚರಾನ್**–ಸೇವಕರಾದ, **ಅಸ್ಮಾಂಶ್ಚ**–ನಮಗೂ ಸಹ, **ಕಿಂಚಿತ್**–ಸ್ವಲ್ಪವುಟ್ಟಿಗೆ, **ಶ್ರಾವಯ**–ಶ್ರವಣ ಮಾಡಿಸಿರಿ.

**ತಾತ್ಪರ್ಯ**—ಶ್ರೀಮದಾಚಾರ್ಯರೇ, ನಿಮ್ಮ ಗ್ರಂಥಗಳನ್ನು ನೋಡಬೇಕು–ಓದಬೇಕು ಎಂಬ ಮನಸ್ಸು (ಬುದ್ಧಿ) ಬರಬೇಕಾದರೇ ಆ ಮನುಷ್ಯ ಹಿಂದೆ ಎಷ್ಟೋ ಜನ್ಮಗಳಲ್ಲಿ ಪುಣ್ಯದ ರಾಶಿಗಳನ್ನು ಗಳಿಸಿರಬೇಕು. ಅವೆಲ್ಲ ಪರಿಪಕ್ವವಾದಾಗ ಸತ್ಕರ್ಮ ಮಾಡಬೇಕೆಂಬ ಬುದ್ಧಿಯು ಹುಟ್ಟುತ್ತದೆ. ಆ ರೀತಿ ಸತ್ಕರ್ಮಾಚರಣೆಯಿಂದ ಅವನ ಅಂತಃಕರಣ ಶುದ್ಧವಾದಾಗಲೇ ಅವನಿಗೆ ನಿಮ್ಮ ಗ್ರಂಥಗಳಲ್ಲಿ ಆಸಕ್ತಿ ಹುಟ್ಟುತ್ತದೆ, ಅಂಥಹ ಅಧಿಕಾರಿಗಳಿಗೇ ನಿಮ್ಮ ಗ್ರಂಥಗಳಲ್ಲಿ ಸಾರಸ ಕಾಣಿಸುತ್ತದೆ. ಏಕೆಂದರೆ ನಿಮ್ಮ ಗ್ರಂಥಗಳಲ್ಲಿ ಮನುಷ್ಯಮಾತ್ರನಾದವನಿಗೆ ಬರಬಹುದಾದ ಸಮಸ್ತ ಸಂದೇಹಗಳಿಗೂ ಸಮರ್ಪಕವಾದ ಪರಿಹಾರವು ಸಿಕ್ಕೇಸಿಗುತ್ತದೆ. ನೀವು ಪ್ರತಿಯೊಂದು ವಿಚಾರಕ್ಕೂ ಅನೇಕ ಶ್ರುತಿ-ಸ್ಮೃತಿ-ಇತಿಹಾಸ-ಪುರಾಣಾದಿ ಗ್ರಂಥಗಳಿಂದ

**ಪೀಠೇ ರತ್ನೋಪಕ್ಲ್ಯಪ್ತೇ ರುಚಿರ-ರುಚಿಮಣಿ-ಜ್ಯೋತಿಷಾ ಸನ್ನಿಷಣ್ಣಂ**
**ಬ್ರಹ್ಮಾಣಂ ಭಾವಿನಂ ತ್ವಾ ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾಃ।**

---

ಪ್ರಮಾಣವಾಕ್ಯಗಳನ್ನು ಉದಹರಿಸಿ ಸ್ಪಷ್ಟಪಡಿಸುತ್ತೀರಿ. ಆದರಿಂದ ನಿಮ್ಮ ಗ್ರಂಥ ಓದಿದರೆ ನಿರ್ಮಲವಾದ, ಪರಿಶುದ್ಧವಾದ ನಿರ್ಣಯಾತ್ಮಕವಾದ ತತ್ತ್ವಜ್ಞಾನೋದಯವಾಗುತ್ತದೆ. ಆದಕಾರಣ ಹೇ ಸ್ವಾಮಿ, ಚಿರಕಾಲದಿಂದಲೂ ನಿಮ್ಮ ಪಾದಪದ್ಮಾರಾಧಕರಾಗಿರುವ ನಾವೂ ಸಹ ನಿಮ್ಮ ಆ ಗ್ರಂಥಗಳನ್ನು ಓದಿ ಕೃತಾರ್ಥರಾಗುವಂತೆ ಅನುಗ್ರಹಮಾಡಿರಿ.

**ಶ್ಲೋಕ ೩೫**— (ಪೀಠೇ) ಆಚಾರ್ಯರ ಮಹಿಮೆಯನ್ನು ಭೂಲೋಕದಲ್ಲಿ ಮಾತ್ರವಲ್ಲ ಸತ್ಯಲೋಕದ ಪರ್ಯಂತ ಎಲ್ಲಾ ದೇವಲೋಕಗಳಲ್ಲೂ ಹಾಡಿ ಹೊಗಳುತ್ತಾರೆಂದು ವರ್ಣಿಸುತ್ತಾರೆ.

**ಪ್ರಧಾನವಾಕ್ಯ**—೧) ವೈದಿಕಾದ್ಯಾಃ ವಿದ್ಯಾಃ ತ್ವಾಂ ಸೇವಂತೇ—ವೇದಾಭಿಮಾನಿ ದೇವತೆಗಳೆಲ್ಲರೂ ನಿಮ್ಮನ್ನು ಸೇವಿಸುತ್ತಾರೆ. ೨) ತವ ಚರಿತಂ ದೇವಸಂಸತ್ಸು ಅಪಿ **ಭಾತಿ**—ನಿಮ್ಮ ಚರಿತ್ರೆ ದೇವತೆಗಳ ಸಭೆಯಲ್ಲೂ ಮೆರೆಯುತ್ತದೆ.

**ಅನ್ವಯಾರ್ಥ—ಸುಚರಿತ**-ನಿರ್ಮಲವಾದ ಚರಿತ್ರೆಯುಳ್ಳ, **ಭಗವನ್** ವಿಷ್ಣುಭಕ್ತ್ಯಾದಿ ಗುಣಗಣಭರಿತರಾದ ಹೇ ವಾಯುದೇವರೇ, ೧) **ನಿಜಪದೇ—ನಿಜ** ನಿಮ್ಮ, **ಪದೇ** ಸ್ಥಾನವಾದ ಸತ್ಯಲೋಕದಲ್ಲಿ, ರತ್ನೋಪಕ್ಲ್ಯಪ್ತೇ—**ರತ್ನ** ನವರತ್ನಗಳಿಂದ, **ಉಪಕ್ಲ್ಯಪ್ತೇ**-ಖಚಿತವಾದ, ರುಚಿರ....ಜ್ಯೋತಿಷಾ—**ರುಚಿರ**-ಮನೋಹರವಾದ, **ರುಚಿ** ಕಾಂತಿಯುಳ್ಳ, **ಮಣಿ**-ನವರತ್ನಗಳ, **ಜ್ಯೋತಿಷಾ**-ಪ್ರಕಾಶದಿಂದ, **ಜ್ವಲತಿ**—ಪ್ರಕಾಶಿಸುತ್ತ ಇರುವ, **ಪೀಠೇ**—ಸಿಂಹಾಸನದಲ್ಲಿ, **ಸಂನಿಷಣ್ಣಂ**—ಕುಳಿತಿರುವ, **ತ್ವಾಂ**—ನಿಮ್ಮನ್ನು, **ವೈದಿಕಾದ್ಯಾಃ**-ವೇದವಿದ್ಯಾಭಿಮಾನಿಗಳೇ ಮೊದಲಾದ, **ವಿದ್ಯಾಃ**-ಸಕಲ ಶಾಸ್ತ್ರಗಳ ಅಭಿಮಾನಿದೇವತೆಗಳೂ, **ಮೂರ್ತಿಮತ್ಯಃ**—ಸಾಕ್ಷಾತ್ತಾಗಿ ಬಂದು, **ಭಾವಿನಂ**—ಮುಂದಿನ ಕಲ್ಪದಲ್ಲಿ ಆಗುವ, **ಬ್ರಹ್ಮಾಣಂ**—

**ಸೇವಂತೇ ಮೂರ್ತಿಮತ್ಯಃ ಸುಚರಿತ ಚರಿತಂ ಭಾತಿ ಗಂಧರ್ವಗೀತಂ**
**ಪ್ರತ್ಯೇಕಂ ದೇವಸಂಸತ್-ಸ್ವಪಿ ತವ ಭಗವನ್**
**ನರ್ತಿತದ್ಯೋವಧೂಷು ॥ ೩೫ ॥**

---

ಬ್ರಹ್ಮದೇವರೇ ನೀವೆಂದು ಹೊಗಳುತ್ತಾ, **ಸೇವಂತೇ ಹಿ**–ಓಲಗಿಸುತ್ತಾರೆ. ೨) **ಪ್ರತ್ಯೇಕಂ**–ಬೇರೆಬೇರೆಯಾಗಿ, ಗಂಧರ್ವಗೀತಂ—**ಗಂಧರ್ವ**-ಗಂಧರ್ವರಿಂದ, **ಗೀತಂ**–ಹಾಡಲ್ಪಡುವ, **ತವ**–ನಿಮ್ಮ, **ಚರಿತಂ** ಚರಿತ್ರೆಯು, ನರ್ತಿತ....ವಧೂಷು—**ನರ್ತಿತ**-ನರ್ತನಮಾಡುವ, **ದ್ಯೋ**–ದೇವಲೋಕದ, **ವಧೂಷು**–ಸ್ತ್ರೀಯರಾದ ಅಪ್ಸರಸ್ತ್ರೀಯರು ಕಿನ್ನರಿಯರೇ ಮೊದಲಾದವರುಳ್ಳ, **ದೇವಸಂಸತ್ಸು ಅಪಿ**–ದೇವತೆಗಳ ಸಭೆಗಳಲ್ಲೂ ಕೂಡ, **ಭಾತಿ**–ಮೆರೆಯುತ್ತದೆ.

**ತಾತ್ಪರ್ಯ**—ವಾಯುದೇವರೇ, ನಿಮ್ಮ ಮೂಲಸ್ಥಾನ ಸತ್ಯಲೋಕ. ಅಲ್ಲಿ ನೀವು ನವರತ್ನಖಚಿತವಾದ ಸಿಂಹಾಸನದ ಮೇಲೆ ಕುಳಿತು ಓಲಗಿಸುತ್ತಿರುವಿರಿ. ಆ ಸಂದರ್ಭದಲ್ಲಿ ವೇದವಿದ್ಯಾಭಿಮಾನಿಗಳು, ಪಂಚರಾತ್ರ ಪುರಾಣಾದಿ ಸಕಲ ವಿದ್ಯಾಭಿಮಾನಿ ದೇವತೆಗಳೂ ಸಾಕ್ಷಾತ್ತಾಗಿ ಬಂದು ನಿಮಗೆ ನಮಸ್ಕರಿಸಿ ನಿಮ್ಮನ್ನು ಹೇ ಭಾವಿಬ್ರಹ್ಮರೇ ಎಂದು ಸ್ತುತಿಸುತ್ತಾ ಓಲಗಿಸುವರು. ಅಷ್ಟೇ ಅಲ್ಲ, ನಿಮ್ಮ ನಿರ್ಮಲವಾದ ಸಚ್ಚರಿತ್ರೆಯನ್ನು ಗಂಧರ್ವಲೋಕದಲ್ಲೂ ಹಾಡಿ ಹೊಗಳುತ್ತಾರೆ. ಸ್ವರ್ಗಲೋಕದ ಸಭೆಗಳಲ್ಲಿ ನಿಮ್ಮ ಚರಿತ್ರೆಯನ್ನು ಕಿನ್ನರಿಯರು ಅಪ್ಸರಸ್ತ್ರೀಯರೇ ಮೊದಲಾದ ಸುರಸುಂದರಿಯರು ಹಾಡುತ್ತಾ ನರ್ತನ ಮಾಡುತ್ತಿರಲು ಅದನ್ನು ಕೇಳಿ ಇಂದ್ರಾದಿ ದೇವತೆಗಳೂ ನಿಮ್ಮ ಮಹಿಮೆಗೆ ತಲೆದೂಗುತ್ತಾರೆ.

**ಶ್ಲೋಕ ೩೬**—(ಸಾನುಕ್ರೋಶೈ) ಮುಂದೆ ೩೮ನೇ ಶ್ಲೋಕದಲ್ಲಿ ಆಚಾರ್ಯರು ಸೂತ್ರಭಾಷ್ಯವನ್ನು ರಚಿಸಿದ್ದನ್ನು ಪ್ರಸ್ತಾಪಿಸುವರು. ಆ ಸೂತ್ರಗಳು ಯಾವುವು ? ಅದರ ಮಹಿಮೆಯೇನು ? ಎಂಬುದನ್ನು ಮುಂದಿನ (೩೭ನೇ) ಶ್ಲೋಕದಲ್ಲಿ ಹೇಳುವುದಕ್ಕಾಗಿ ಆ ಸೂತ್ರಗಳನ್ನು ರಚಿಸಿದ ವೇದವ್ಯಾಸರು ಅವತಾರ ಮಾಡುವುದಕ್ಕೆ ಕಾರಣವನ್ನು ಈ ಶ್ಲೋಕದಲ್ಲಿ ಪ್ರಸ್ತಾಪಿಸುತ್ತಾರೆ.

**ಸಾನುಕ್ರೋಶೈರಜಸ್ರಂ ಜನಿಮೃತಿ-ನಿರಯಾ-ದ್ಯೂರ್ಮಿಮಾಲಾ**
**ऽऽವಿಲೇऽಸ್ಮಿನ್**
**ಸಂಸಾರಾಬ್ಧೌ ನಿಮಗ್ನಾಂ-ಸ್ಚರಣ-ಮಶರಣಾ-ನಿಚ್ಛತೋ**
**ವೀಕ್ಷ್ಯ ಜಂತೂನ್ ।**
**ಯುಷ್ಮಾಭಿಃ ಪ್ರಾರ್ಥಿತಃ ಸನ್ ಜಲನಿಧಿಶಯನಃ**
**ಸತ್ಯವತ್ಯಾಂ ಮಹರ್ಷೇರ್**
**ವ್ಯಕ್ತಶ್ಚಿನ್ಮಾತ್ರಮೂರ್ತಿರ್ ನ ಖಲು ಭಗವತಃ ಪ್ರಾಕೃತೋ**
**ಜಾತು ದೇಹಃ ॥ ೩೬ ॥**

---

**ಪ್ರಧಾನವಾಕ್ಯ**—೧) ಜಲನಿಧಿಶಯನಃ ಸತ್ಯವತ್ಯಾಂ ಮಹರ್ಷೇಃ ವ್ಯಕ್ತಃ—ಶ್ರೀಮನ್ನಾರಾಯಣನೇ ಸತ್ಯವತೀದೇವಿಯಲ್ಲಿ ಪರಾಶರಮಹರ್ಷಿಗಳಿಂದ ವೇದವ್ಯಾಸನಾಗಿ ಅಭಿವ್ಯಕ್ತನಾದನು. ೨) ಭಗವತಃ ಜಾತು ಪ್ರಾಕೃತಃ ದೇಹಃ ನ ಖಲು=ಆ ಭಗವಂತನಿಗೆ ಎಂದೆಂದೂ ಪ್ರಾಕೃತವಾದ ದೇಹ ಬರುವುದಿಲ್ಲ.

**ಅನ್ವಯಾರ್ಥ**—೧) ಜಲ........ಶಯನಃ—**ಜಲನಿಧಿ**-ಕ್ಷೀರಸಮುದ್ರದಲ್ಲಿ, **ಶಯನಃ**-ಮಲಗಿದ ಶ್ರೀಮನ್ನಾರಾಯಣನು, ಜನಿ....ವಿಲೇ—**ಜನಿ**-ಹುಟ್ಟುವುದು, **ಮೃತಿ**-ಸಾಯುವುದು, **ನಿರಯ**-ನರಕದಲ್ಲಿ ಬೀಳುವುದು, **ಆದಿ**-ಮೊದಲಾದ, **ಊರ್ಮಿ**-ಅಲೆಗಳ, **ಮಾಲಾ**-ಪರಂಪರೆಗಳಿಂದ, **ಆವಿಲೇ**-ಕಲುಷಿತವಾದ, **ಅಸ್ಮಿನ್**-ಈ, ಸಂಸಾರಾಬ್ಧೌ-**ಸಂಸಾರ**-ಸಂಸಾರವೆಂಬ, **ಅಬ್ಧೌ**-ಸಮುದ್ರದಲ್ಲಿ, **ಅಜಸ್ರಂ**-ನಿರಂತರವಾಗಿ, **ನಿಮಗ್ನಾನ್**-ಮುಳಿಗಿರುವಂಥಾ, **ಅಶರಣಾನ್**-ರಕ್ಷಕರಿಲ್ಲದ, **ಶರಣಂ**-ಮೊರೆಯನ್ನು (ರಕ್ಷಣೆಯನ್ನು), **ಇಚ್ಛತಃ**-ಬಯಸುತ್ತಿರುವ, **ಜಂತೂನ್**-ಪ್ರಾಣಿಗಳನ್ನು, **ವೀಕ್ಷ್ಯ**-ನೋಡಿ, **ಸಾನುಕ್ರೋಶೈಃ**-ಮರುಕಗೊಂಡ, **ಯುಷ್ಮಾಭಿಃ**-ನೀವು ಬ್ರಹ್ಮರುದ್ರಾದಿಗಳಿಂದ, **ಪ್ರಾರ್ಥಿತಃ ಸನ್**-ಪ್ರಾರ್ಥಿತನಾಗಿ, **ಸತ್ಯವತ್ಯಾಂ**-ಸತ್ಯವತೀದೇವಿಯಲ್ಲಿ, **ಮಹರ್ಷೇಃ**-ಪರಾಶರಮಹರ್ಷಿಗಳಿಂದ, **ವ್ಯಕ್ತಃ**-ವೇದವ್ಯಾಸರಾಗಿ ಆವಿರ್ಭವಿಸಿದನು. ೨) (ಸಃ) ಆ ಭಗವಂತನು, ಚಿನ್ಮಾತ್ರಮೂರ್ತಿಃ—**ಚಿತ್**-ಜ್ಞಾನಾನಂದಾದಿ ಗುಣಗಳೇ, **ಮಾತ್ರ**-ಕೇವಲ

**ಅಸ್ತವ್ಯಸ್ತಂ ಸಮಸ್ತ-ಶ್ರುತಿಗತಮಧಮೈ ರತ್ಯಪೂಗಂ ಯಥಾಂಧೈ-
ರರ್ಥಂ ಲೋಕೋಪ(ಕೃತ್ಯೆ)ಕ್ಲುಪ್ತ್ಯೈ ಗುಣಗಣನಿಲಯಃ
ಸೂತ್ರಯಾಮಾಸ ಕೃತ್ಸ್ನಮ್ ।**

---

ವಾಗಿರುವ, **ಮೂರ್ತಿಃ**-ದೇಹವುಳ್ಳವನು, **ಭಗವತಃ**-ಆ ಭಗವಂತನಿಗೆ, **ಜಾತು**-ಎಂದೆಂದಿಗೂ, **ಪ್ರಾಕೃತಃ**-ಮೂಳೆಮಾಂಸಾಂದಿರೂಪವಾದ, **ದೇಹಃ**-ದೇಹವು, **ನ ಖಲು**-ಸರ್ವಥಾ ಇರುವುದಿಲ್ಲವೆಂಬುದು ಶ್ರುತಿ ಪ್ರಸಿದ್ಧವಾಗಿದೆ.

**ತಾತ್ಪರ್ಯ**—ಜನನ ಮರಣಗಳ ಚಕ್ರಕ್ಕೇ ಸಂಸಾರವೆಂದು ಹೆಸರು. ಈ ಸಂಸಾರವೆಂಬ ಸಮುದ್ರವು ಜನನ-ಮರಣ, ಸ್ವರ್ಗ-ನರಕಾದಿ ಅನೇಕ ಸುಳಿಗಳಿಂದ ತುಂಬಿರುವುದರಿಂದ ಈ ಸುಳಿಗೆ ಸಿಕ್ಕವರು ಇದರಿಂದ ಪಾರಾಗುವುದೇ ದುಸ್ತರ. ಈ ಪ್ರಕಾರ ಸಂಸಾರಸಾಗರದಲ್ಲಿ ಮುಳುಗಿ ರಕ್ಷಕರನ್ನು ಕಾಣದೆ ಗೋಳಾಡುತ್ತಿರುವ ಸಜ್ಜನರಲ್ಲಿ ಮರುಕಗೊಂಡವರಾಗಿ, ಹೇ ವಾಯುದೇವರೇ, ನೀವೂ ಬ್ರಹ್ಮರುದ್ರಾದಿಗಳೊಡನೆ ಸೇರಿ ಭಗವಂತ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದಿರಿ. ಅದರಿಂದ ಆ ಭಗವಂತನು ಸತ್ಯವತೀದೇವಿಯಲ್ಲಿ ಪರಾಶರರಿಂದ ಅಭಿವ್ಯಕ್ತನಾಗಿ ವೇದವ್ಯಾಸನೆಂಬ ಹೆಸರಿನಿಂದ ಅವತಾರಮಾಡಿದನು. ಆ ಭಗವಂತನ ದೇಹವು ಕೇವಲ ಜ್ಞಾನಾನಂದಾದಿ ಅನಂತಗುಣಮಯವಾದ ಅಪ್ರಾಕೃತ ಶರೀರವಾದ್ದರಿಂದ ಅವನಿಗೆ ಎಂದೆಂದಿಗೂ ಪ್ರಾಕೃತವಾದ ಮಜ್ಜಾ-ಮಾಂಸಾದಿಮಯವಾದ ಪ್ರಾಕೃತ ದೇಹವು ಬರುವುದೇ ಇಲ್ಲ.

**ಶ್ಲೋಕ ೩೭**—(ಅಸ್ತವ್ಯಸ್ತ) ಆ ವೇದವ್ಯಾಸ ಮಹರ್ಷಿಗಳೇ ಬ್ರಹ್ಮಸೂತ್ರಗಳನ್ನು ರಚಿಸಿದರೆಂದು ಹೇಳುತ್ತಾರೆ.

**ಪ್ರಧಾನವಾಕ್ಯ**—ವ್ಯಾಸಾಭಿಧಾನಃ ಯೋಽಸೌ ಸಮಸ್ತ ಶ್ರುತಿಗತಂ ಅರ್ಥಂ ಸೂತ್ರಯಾಮಾಸ, ತಂ ಅಹಂ ನಮಾಮಿ = ವೇದವ್ಯಾಸರೆಂಬ ಯಾವ ಮಹರ್ಷಿಗಳು ಸಕಲ ವೇದಗಳ ಅರ್ಥವನ್ನೂ ಸಂಗ್ರಹಿಸಿ ಬ್ರಹ್ಮಸೂತ್ರಗಳನ್ನು ರಚಿಸಿದರೋ ಅವರನ್ನು ನಾನು ವಂದಿಸುತ್ತೇನೆ.

**ಅನ್ವಯಾರ್ಥ**—ಗುಣಗಣನಿಲಯಃ —**ಗುಣ**-ಆನಂದಾದಿ ಗುಣಗಳ,

**ಯೋಽಸೌ ವ್ಯಾಸಾಭಿಧಾನಸ್ ತಮಹ-ಮಹರಹರ್-ಭಕ್ತಿತ-**
**(ಸ್ತತ್)ಸ್ತ್ವತ್-ಪ್ರಸಾದಾತ್**
**ಸದ್ಯೋ ವಿದ್ಯೋಪಲಬ್ಧ್ಯೈ ಗುರುತಮ-ಮಗುರುಂ**
**ದೇವದೇವಂ ನಮಾಮಿ || ೩೭ ||**

---

**ಗಣ**–ಅನಂತವಾದ ಸಮೂಹಕ್ಕೆ, **ನಿಲಯಃ**–ಆಶ್ರಯಸ್ಥಾನರಾದ, ವ್ಯಾಸಾಭಿಧಾನಃ—**ವ್ಯಾಸ**–ವೇದವ್ಯಾಸರೆಂಬ, **ಅಭಿಧಾನಃ**–ಹೆಸರುಳ್ಳ, **ಯಃ ಅಸೌ**–ಯಾವ ಮಹರ್ಷಿಗಳು, **ಅಂಧೈಃ**–ಕುರುಡರಿಂದ, ಸಮಸ್ತ....ಗತಂ—**ಸಮಸ್ತ**–ಎಲ್ಲಾ ಜನರ, **ಶೃತಿ**–ಕಿವಿಗಳಲ್ಲೂ, **ಗತಂ**–ಇದ್ದಂಥಾ (ಎಂದರೆ ಲೋಕಪ್ರಸಿದ್ಧವಾದ ಎಂದರ್ಥ), ರತ್ನಪೂಗಂ—**ರತ್ನ**–ನವರತ್ನಗಳ, **ಪೂಗಂ**-ಸಮೂಹವು, **ಯಥಾ**–ಹೇಗೆ, **ಅಸ್ತವ್ಯಸ್ತಂ**–ಯದ್ವಾತದ್ವಾ ಪೋಣಿಸಲ್ಪಡುವುದೋ ಹಾಗೆ, **ಅಂಧೈಃ**–ಜ್ಞಾನರಹಿತರಾಗಿ ಕುರುಡರಾದ, **ಅಧಮೈಃ**–ಅಯೋಗ್ಯ ಜನಗಳಿಂದ, **ಅಸ್ತವ್ಯಸ್ತಂ**–ಸಿಕ್ಕಾಬಟ್ಟೆ ಅರ್ಥಮಾಡಲ್ಪಟ್ಟ, ಸಮಸ್ತ....ಗತಂ—**ಸಮಸ್ತ**–ಸಕಲವಾದ, **ಶ್ರುತಿ**–ಅನಂತ ವೇದಗಳಲ್ಲಿ, **ಗತಂ**-ಇರುವಂಥಾ, **ಕೃತ್ಸ್ನಂ**–ವಿಶಿಷ್ಟವಾದ (**ಅಷ್ಟೂ**), **ಅರ್ಥಂ**–ಅರ್ಥವನ್ನೂ, **ಲೋಕೋಪ** (ಕೃತ್ಯೈ) ಕ್ಲಪ್ತ್ಯೈ—**ಲೋಕ**-ಸಮಸ್ತ ಸಜ್ಜನರಿಗೆ **ಉಪ(ಕೃತ್ಯೈ)** ಕ್ಲಪ್ತ್ಯೈ=ಉಪಕಾರ ಮಾಡುವುದಕ್ಕಾಗಿ, **ಸೂತ್ರ್ಯಯಾಮಾಸ**-ಬ್ರಹ್ಮಸೂತ್ರಗಳನ್ನು ರಚಿಸಿ ಹೇಳಿದರೋ, **ಗುರುತಮಂ**–ಅತಿ ಶ್ರೇಷ್ಠ ಗುರುಗಳಾದ, **ಅಗುರುಂ**–ಬೇರೆ ಗುರುಗಳಿಲ್ಲದ (ಅಕಾರವಾದ್ಯರಾದ ಗುರುಗಳಾದ), ದೇವ ದೇವಂ—**ದೇವ**-ಬ್ರಹ್ಮರುದ್ರಾದಿ ದೇವತೆಗಳಿಗೂ, **ದೇವಂ**-ದೇವತೆಯಾದ, **ತಂ**–ಆ ವೇದವ್ಯಾಸರನ್ನು, (ತತ್ ಪ್ರಸಾದಾತ್) ತ್ವತ್ ಪ್ರಸಾದಾತ್—**ತತ್**–ಅವರ, (**ತ್ವತ್**–ನಿಮ್ಮ), **ಪ್ರಸಾದಾತ್**–ಅನುಗ್ರಹದಿಂದ, ಸದ್ಯೋ....ಲಬ್ಧ್ಯೈ—**ಸದ್ಯಃ**–ಆಕ್ಷಣ (ಕೂಡಲೇ), **ವಿದ್ಯಾ**–ವಿದ್ಯೆಯು, **ಉಪಲಬ್ಧ್ಯೈ**-ದೊರಕುವುದಕ್ಕಾಗಿ, **ಅಹಂ**–ನಾನು, **ಅಹರಹಃ**-ಪ್ರತಿನಿತ್ಯವೂ (ದಿನೇದಿನೇ). **ಭಕ್ತಿತಃ**–ಭಕ್ತಿಯಿಂದ, **ನಮಾಮಿ**–ನಮಸ್ಕರಿಸುತ್ತೇನೆ.

**ತಾತ್ಪರ್ಯ**—ಕುರುಡರ ಕೈಗೆ ನವರತ್ನಗಳನ್ನು ಕೊಟ್ಟರೂ ಸಹ ಅವುಗಳನ್ನು ಮನಸ್ಸುಬಂದಂತೆ ಜೋಡಿಸಿ ಅವುಗಳ ಅಂದಚೆಂದವನ್ನೇ ಹೇಗೆ

**ಆಜ್ಞಾಮನ್ಯೈರಧಾರ್ಯಾಂ ಶಿರಸಿ ಪರಿಸರದ್ ರಶ್ಮಿಕೋಟೀರಕೋಟೌ**
**ಕೃಷ್ಣಸ್ಯಾಕ್ಲಿಷ್ಟಕರ್ಮಾ ದಧ-ದನುಸರಣಾ-ದರ್ಥಿತೋ ದೇವಸಂಘೈಃ** ।

---

ನಾಶಮಾಡಿಬಿಡುತ್ತಾರೋ ಅದೇ ಪ್ರಕಾರ ದ್ವಾಪರಯುಗದಲ್ಲಿ ಅನೇಕ ಅಯೋಗ್ಯಜನಗಳು ವೇದಗಳಿಗೆ ಮನಸ್ಸು ಬಂದಂತೆ ಅರ್ಥಹೇಳಿ ವೇದಗಳ ಪ್ರಾಮಾಣ್ಯಕ್ಕೇ ಧಕ್ಕೆಬರುವಂತೆ ಮಾಡಿಬಿಟ್ಟಿದ್ದರು. ಅದರಿಂದ ಸ್ವಯಂ ಜ್ಞಾನನಿಧಿಗಳಾದ ವೇದವ್ಯಾಸರು ಅನಂತ ವೇದಗಳಲ್ಲಿ ಹೇಳಿರುವ ಸಮಸ್ತ ಪ್ರಮೇಯಾಂಶಗಳನ್ನೂ ಕೇವಲ ಐನೂರ ಅರುವತ್ತನಾಲ್ಕು ಸೂತ್ರಗಳಲ್ಲಿ ಜೋಡಿಸಿ ಬ್ರಹ್ಮಸೂತ್ರಗಳನ್ನು ರಚಿಸಿದರು. ಅಂಥಾ ವೇದವ್ಯಾಸರ ಅನುಗ್ರಹವು ನಮಗೆ ಅತ್ಯವಶ್ಯಕವಾಗಿ ಬೇಕಾಗಿರುವುದರಿಂದ ನಿಮ್ಮ ಅಂತರ್ಗತರಾದ ಆ ವೇದವ್ಯಾಸದೇವರಿಗೆ ನಮಸ್ಕಾರ ಮಾಡುತ್ತೇನೆ.

**ಶ್ಲೋಕ ೩೮**—(ಆಜ್ಞಾಂ) ವಾಯುದೇವರು ಭಗವಂತನ ಆಜ್ಞಾಪ್ರಕಾರ ಭೂಮಿಯಲ್ಲಿ ಅವತಾರಮಾಡಿ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿ ಮಣಿಮಂತನ ಭಾಷ್ಯವನ್ನು ನಿರಾಕರಿಸಿದರೆಂದು ಹೇಳುತ್ತಾರೆ.

**ಪ್ರಧಾನವಾಕ್ಯ**—ತ್ವಂ ಕೃಷ್ಣಸ್ಯ ಆಜ್ಞಾಂ ದಧತ್, ದೇವಸಂಘೈಃ ಅರ್ಥಿತಃ, ಭೂಮೌ ಆಗತ್ಯ, ಮಣಿಮತಃ ಉದಿತಂ ದುರ್ಭಾಷ್ಯಂ ವ್ಯಸ್ತ್ರೈ, ಬ್ರಹ್ಮಸೂತ್ರಸ್ಯ ಭಾಷ್ಯಂ ಅಕರೋಃ—ನೀವು ಶ್ರೀಹರಿಯ ಆಜ್ಞೆಯನ್ನು ಶಿರಸಾವಹಿಸಿ, ರುದ್ರಾದಿ ದೇವತೆಗಳಿಂದ ಪ್ರಾರ್ಥಿತರಾಗಿ, ಭೂಮಿಯಲ್ಲಿ ಅವತಾರಮಾಡಿ, ಮಣಿಮಂತನ ದುರ್ಭಾಷ್ಯವನ್ನು ನಿರಾಸಮಾಡಿ, ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದಿರಿ.

**ಅನ್ವಯಾರ್ಥ—ಭೂಮನ್**-ಪೂರ್ಣಜ್ಞಾನವುಳ್ಳ ವಾಯದೇವರೇ, **ಅನ್ಯೈಃ**-ಇತರರಿಂದ, **ಅಧಾರ್ಯಾಂ**-ನಡೆಸಲು ಸಾಧ್ಯವಿಲ್ಲದ, **ಕೃಷ್ಣಸ್ಯ**-ಶ್ರೀಮನ್ನಾರಾಯಣನ, **ಆಜ್ಞಾಂ**-ಆಜ್ಞೆಯನ್ನು, **ಪರಿ........ಕೋಟೌ—ಪರಿಸರತ್**-ಸುತ್ತಲೂ ಹರಡುತ್ತಿರುವ, **ರಶ್ಮಿ**-ಕಾಂತಿಯ ಕಿರಣಗಳುಳ್ಳ, **ಕೋಟೀರ**-ಕಿರೀಟದ, **ಕೋಟೌ**-ತುದಿಯುಳ್ಳ, **ಶಿರಸಿ**-ಶಿರಸ್ಸಿನಲ್ಲಿ, **ದಧತ್**-ವಹಿಸಿದವರಾಗಿ, (ಖ) ದೇವ.:......ಸಂಘೈಃ—**ದೇವ**-ರುದ್ರಾದಿ

**ಭೂಮಾವಾಗತ್ಯ ಭೂಮನ್-ನಸುಕರ-ಮಕರೋರ್-**
**ಬ್ರಹ್ಮಸೂತ್ರಸ್ಯ ಭಾಷ್ಯಂ**
**ದುರ್ಭಾಷ್ಯಂ ವ್ಯಸ್ಯ ದಸ್ಯೋರ್ ಮಣಿಮತ ಉದಿತಂ**
**ವೇದಸದ್ಯುಕ್ತಿಭಿಸ್ತ್ವಮ್** ॥ ೩೮ ॥

---

ದೇವತೆಗಳ, **ಸಂಘ್ಯೈಃ**-ಸಮೂಹಗಳಿಂದ, **ಅನುಸರಣಾತ್**-ಹಿಂಬಾಲಿಸಿಬಂದು **ಅರ್ಥಿತಃ**-ಪ್ರಾರ್ಥಿಸಲ್ಪಟ್ಟವರಾಗಿ, (ಗ) ಅಕ್ಲಿಷ್ಟಕರ್ಮಾ—**ಅಕ್ಲಿಷ್ಟ**-ಸ್ವಲ್ಪವೂ ಆಯಾಸವಿಲ್ಲದೆ, **ಕರ್ಮಾ**-ಕೆಲಸವನ್ನು ಮಾಡುವ, **ತ್ವಂ**-ನೀವು, (ಘ) **ಭೂಮ್**-ಭೂಮಿಯಮೇಲೆ, **ಆಗತ್ಯ**-(ಅವತಾರಮಾಡಿ) ಬಂದು, (ಙ) **ದಸ್ಯೋಃ**-ವಂಚಕನಾದ **ಮಣಿಮತಃ**-ಮಣಿಮಂತ ಮೊದಲಾದವರು **ಉದಿತಂ**-ರಚಿಸಿದ, **ದುರ್ಭಾಷ್ಯಂ**-ಸಕಲ ದುರ್ಭಾಷ್ಯಗಳನ್ನೂ, ವೇದ.... **ಕ್ತಿಭಿಃ**—**ವೇದ**-ಶ್ರುತಿ-ಸ್ಮೃತಿ-ಪುರಾಣಾದಿ ವಾಕ್ಯಗಳಿಂದಲೂ, **ಸದ್ಯುಕ್ತಿಭಿಃ**-ಪ್ರಬಲವಾದ ಯುಕ್ತಿಗಳಿಂದಲೂ, **ವ್ಯಸ್ಯ**-ನಿರಾಕರಣೆಮಾಡಿ, (ಚ) **ಅಸುಕರಂ**-ಇತರರಿಂದ ರಚಿಸಲು ಸಾಧ್ಯವಿಲ್ಲದ, **ಬ್ರಹ್ಮಸೂತ್ರಸ್ಯ**-ಬ್ರಹ್ಮಸೂತ್ರಗಳ, **ಭಾಷ್ಯಂ**-ಭಾಷ್ಯವನ್ನು, **ಅಕರೋಃ**-ರಚಿಸಿದಿರಿ.

**ತಾತ್ಪರ್ಯ**—ಹೇ ವಾಯುದೇವರೇ, ನೀವು ಭಗವಂತನ ಆಜ್ಞೆಯನ್ನು ಶಿರಸಾವಹಿಸಿ ರುದ್ರಾದಿ ದೇವತೆಗಳ ಪ್ರಾರ್ಥನೆಗೆ ಕಿವಿಗೊಟ್ಟು, ಭೂಮಿಯಲ್ಲಿ ಮಧ್ವಾಚಾರ್ಯರಾಗಿ ಅವತಾರಮಾಡಿ ಬಂದು, ಮಣಿಮಂತನೇ ಮೊದಲಾದ ಇಪ್ಪತ್ತೊಂದು ದುರ್ಜನರು ಬರೆದಿದ್ದ ದುರ್ಭಾಷ್ಯಗಳನ್ನು ಅನೇಕ ಪ್ರಮಾಣ ವಾಕ್ಯಗಳಿಂದಲೂ ಪ್ರಬಲಯುಕ್ತಿಗಳಿಂದಲೂ ನಿರಾಕರಿಸಿ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದಿರಿ.

**ಶ್ಲೋಕ ೩೯**—(ಭೂತ್ವಾ) ಸೂತ್ರಭಾಷ್ಯವಲ್ಲದೆ ಇತರ ಗ್ರಂಥಗಳನ್ನೂ ತಾತ್ಪರ್ಯನಿರ್ಣಯವನ್ನೂ ರಚಿಸಿದರೆಂದು ಬಿನ್ನವಿಸಿಕೊಳ್ಳುತ್ತಾರೆ.

**ಪ್ರಧಾನವಾಕ್ಯ**—ಭವಾನ್ ಮಧ್ಯಗೇಹಾಖ್ಯಗೇಹೇ ಭೂತ್ವಾ, ಪಾರಿವ್ರಾಜ್ಯಾಧಿರಾಜಃ, ಬದರೀಂ ಪ್ರಾಪ್ಯ, ಕೃಷ್ಣಂ ಚ ನತ್ವಾ, ಭಾಷ್ಯಾಣಿ ಕೃತ್ವಾ,

**ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗುಣನಿಲಯೇ ರೌಪ್ಯಪೀಠಾಭಿಧಾನೇ**
**ತತ್ರಾಪಿ ಬ್ರಹ್ಮಜಾತಿಸ್-ತ್ರಿಭುವನ(ವಿದಿತೇ)ವಿಶದೇ**
**ಮಧ್ಯಗೇಹಾಖ್ಯಗೇಹೇ ।**
**ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ**
**ಕೃತ್ವಾ ಭಾಷ್ಯಾಣಿ ಸಮ್ಯಗ್ ವ್ಯತನುತ ಚ ಭವಾನ್**
**ಭಾರತಾರ್ಥಪ್ರಕಾಶಮ್ ॥ ೩೯ ॥**

---

ಭಾರತಾರ್ಥಪ್ರಕಾಶಂ ವ್ಯತನುತ—ನೀವು (ಉಡುಪಿಕ್ಷೇತ್ರದಲ್ಲಿ) ಮಧ್ಯಗೇಹ ಭಟ್ಟರ ಮನೆಯಲ್ಲಿ ಜನಿಸಿ, ಸಂನ್ಯಾಸಿಶಿರೋಮಣಿಗಳಾಗಿ, ಬದರೀಗೆ ಹೋಗಿ, ವೇದವ್ಯಾಸರಿಗೆ ವಂದಿಸಿ ಗೀತಾಭಾಷ್ಯ-ಉಪನಿಷದ್ಭಾಷ್ಯಗಳನ್ನು ಮತ್ತು ಮಹಾ ಭಾರತತಾತ್ಪರ್ಯನಿರ್ಣಯವನ್ನೂ ರಚಿಸಿದಿರಿ.

ಅನ್ವಯಾರ್ಥ—ಎಲೈ ಶ್ರೀಮದಾನಂದತೀರ್ಥರೇ, **ಭವಾನ್**-ನೀವು, **ವಿಶುದ್ಧೇ**-ಪರಿಶುದ್ಧವಾದ, ದ್ವಿಜ....ನಿಲಯೇ—**ದ್ವಿಜ**-ಬ್ರಾಹ್ಮಣರ, **ಗಣ**-ಗುಂಪುಗಳಿಗೆ, **ನಿಲಯೇ**-ಆವಾಸಸ್ಥಾನವಾಗಿದ್ದ, ತ್ರಿ....ವಿಶದೇ—**ತ್ರಿಭುವನ**-ಮೂರು ಲೋಕಗಳಲ್ಲೂ, **ವಿಶದೇ(ವಿದಿತೇ)** ಪ್ರಖ್ಯಾತವಾದ, **ರೌಪ್ಯಪೀಠಾಭಿಧಾನೇ**-ರೌಪ್ಯ ಪೀಠ (ಉಡುಪಿ) ಎಂದು ಹೆಸರುಳ್ಳ, **ಕ್ಷೇತ್ರೇ**-ಪುಣ್ಯಕ್ಷೇತ್ರದಲ್ಲಿ, **ತತ್ರಾಪಿ**-ಅದರಲ್ಲಿಯೂ, **ಮಧ್ಯಗೇಹಾಖ್ಯಗೇಹೇ**-ಮಧ್ಯಗೇಹಭಟ್ಟರ ಮನೆಯಲ್ಲಿ ಪತ್ನಿಯಲ್ಲಿ), **ಬ್ರಾಹ್ಮಣಜಾತಿಃ**-ಬ್ರಾಹ್ಮಣ ಜಾತಿಯಾಗಿ, **ಭೂತ್ವಾ**-ಹುಟ್ಟಿ, **ಪಾರಿವ್ರಾಜ್ಯಾಧಿರಾಜಃ**-ಸಂನ್ಯಾಸಿ ಶಿರೋಮಣಿಗಳಾಗಿ, **ಪುನರಪಿ**-ಮತ್ತೆ ಇನ್ನೊಂದಾವರ್ತಿ, **ಬದರೀಂ**-ಬದರೀ ಕ್ಷೇತ್ರಕ್ಕೆ, **ಪ್ರಾಪ್ಯ**-ಹೋಗಿ, **ಕೃಷ್ಣಂ ಚ**-ವೇದವ್ಯಾಸರಿಗೂ, **ನತ್ವಾ**-ನಮಸ್ಕರಿಸಿ, **ಭಾಷ್ಯಾಣಿ**-ಗೀತಾಭಾಷ್ಯ-ಉಪನಿಷದ್ಭಾಷ್ಯಗಳನ್ನೂ, **ಕೃತ್ವಾ**-ಮಾಡಿ, **ಭಾರತಾರ್ಥಪ್ರಕಾಶಂ ಚ**-ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥವನ್ನೂ, **ಸಮ್ಯಕ್**-ಚೆನ್ನಾಗಿ, **ವ್ಯತನುತ**-ವಿರಚಿಸಿದಿರಿ.

ತಾತ್ಪರ್ಯ—ಹೇ ಮಧ್ವಾಚಾರ್ಯರೇ, ನೀವು ಭಗವಂತನ ಆಜ್ಞಾನು ಸಾರ ಬ್ರಾಹ್ಮಣೋತ್ತಮರ ಬೀಡಾಗಿದ್ದ ರೌಪ್ಯಪೀಠ (ಉಡುಪಿ) ಎಂಬ ಕ್ಷೇತ್ರ

**ವಂದೇ ತಂ ತ್ವಾ ಸುಪೂರ್ಣ–ಪ್ರಮತಿಮನುದಿನಾ–ಸೇವಿತಂ**
**ದೇವವೃಂದ್ಯೈರ್**
**ವಂದೇ ವಂದಾರುಮೀಶೇ ಶ್ರಿಯ ಉತ ನಿಯತಂ**
**ಶ್ರೀಮದಾನಂದತೀರ್ಥಮ್ ।**

---

ದಲ್ಲಿ ಮಧ್ಯಗೇಹಭಟ್ಟರೆಂಬ ವಿಪ್ರೋತ್ತಮರ ಮನೆಯಲ್ಲಿ ಅವತರಿಸಿ, ಸಂನ್ಯಾಸ ಗ್ರಹಣಮಾಡಿ, ಬದರಿಕಾಶ್ರಮಕ್ಕೆ ಎರಡಾವರ್ತಿ ಹೋಗಿ, ವೇದವ್ಯಾಸರಿಗೆ ವಂದಿಸಿ, ಅವರ ಅಪ್ಪಣೆಯ ಮೇರೆಗೆ ಗೀತಾಭಾಷ್ಯ ಉಪನಿಷದ್ಭಾಷ್ಯಾದಿ ಗ್ರಂಥ ಗಳನ್ನು ರಚಿಸಿ, ಮಹಾಭಾರತತಾತ್ಪರ್ಯನಿರ್ಣಯವೆಂಬ ನಿರ್ಣಯ ಗ್ರಂಥ ವನ್ನೂ ವಿರಚಿಸಿದಿರಿ.

**ಶ್ಲೋಕ ೪೦**—(ವಂದೇ ತಂ) ವಂದನಾರ್ಪಣೆಮಾಡಿ ಮಧ್ವಾವತಾರ ನಿರೂಪಣೆಯನ್ನೂ ಮುಗಿಸುತ್ತಾರೆ.

**ಪ್ರಧಾನವಾಕ್ಯ**—೧) ದೇವವೃಂದ್ಯೈಃ ಸೇವಿತಂ ತ್ವಾ ವಂದೇ—ರುದ್ರೇಂದ್ರಾದಿ ದೇವತೆಗಳಿಂದ ಸೇವಿತರಾದ ನಿಮ್ಮನ್ನು ವಂದಿಸುತ್ತೇನೆ. ೨) ಶ್ರೀಮದಾನಂದತೀರ್ಥಂ (ತ್ವಾ) ವಂದೇ–ಶ್ರೀಮದಾನಂದತೀರ್ಥರೆಂಬ ನಿಮ್ಮನ್ನು ವಂದಿಸುತ್ತೇನೆ. ೩) ಮಂದಾಕಿನೀ....ಸೇಕಾಧಿಕ್ಯಸಂಗಂ ವಂದೇ—ಗಂಗಾ ನದಿಯಲ್ಲಿ ಸ್ನಾನಮಾಡಿದ್ದಕ್ಕಿಂತಲೂ ಹೆಚ್ಚು ಪುಣ್ಯಪ್ರದರಾದ ನಿಮಗೆ ವಂದನೆ. ೪) ದೇವ, ಅಹಂ ಭಕ್ತ್ಯಾ (ತ್ವಾ) ವಂದೇ–ಸ್ವಾಮಿ, ನಿಮ್ಮನ್ನು ನಾನು ಭಕ್ತಿಯಿಂದ ವಂದಿಸುತ್ತೇನೆ.

**ಅನ್ವಯಾರ್ಥ**—ದೇವವೃಂದ್ಯೈಃ–**ದೇವ**–ರುದ್ರೇಂದ್ರಾದಿ ದೇವತೆಗಳ, **ವೃಂದ್ಯೈಃ**–ಸಮೂಹಗಳಿಂದ, ಅನು....ಸೇವಿತಂ—೧) **ಅನುದಿನ**–ಪ್ರತಿನಿತ್ಯವೂ **ಆ**–ಚೆನ್ನಾಗಿ, **ಸೇವಿತಂ**–ಸೇವಿಸಲ್ಪಡುವ, **ಸುಪೂರ್ಣಪ್ರಮತಿಂ** ಪೂರ್ಣ-ಪ್ರಜ್ಞಾಚಾರ್ಯರೆಂಬ, **ತಂ**-ಆ, **ತ್ವಾ**–ನಿಮ್ಮನ್ನು, **ವಂದೇ**–ವಂದಿಸುತ್ತೇನೆ. ೨) **ಈಶೇ**–ಸರ್ವಸ್ವಾಮಿಯಾದ ವಿಷ್ಣುವನ್ನು, **ನಿಯತಂ** ನಿಯತವಾಗಿಯೂ ಅತ್ಯಧಿಕವಾಗಿಯೂ, **ಉತ**–ಮತ್ತು, **ಶ್ರಿಯಃ**–ಲಕ್ಷ್ಮೀದೇವಿಯನ್ನೂ,

**ವಂದೇ ಮಂದಾಕಿನೀ-ಸತ್-ಸರಿದಮಲಜಲಾ-ಸೇಕಸಾಧಿಕ್ಯಸಂಗಂ**
**ವಂದೇಽಹಂ ದೇವ ಭಕ್ತ್ಯಾ ಭವಭಯದಹನಂ ಸಜ್ಜನಾನ್**
**ಮೋದಯಂತಮ್ ॥ ೪೦ ॥**

---

**ವಂದಾರುಂ**–ವಂದನಮಾಡುವುದರಲ್ಲಿ ನಿರತರಾದ, **ಶ್ರೀಮದಾನಂದತೀರ್ಥಂ**-ಆನಂದತೀರ್ಥ ಭಗವತ್ಪಾದರೆಂಬ ನಿಮ್ಮನ್ನು, **ವಂದೇ**–ವಂದಿಸುತ್ತೇನೆ. ೩) ಮಂದಾಕಿನೀ....ಸಂಗಂ—**ಮಂದಾಕಿನೀ**–ದೇವಗಂಗೆಯೆಂಬ, **ಸತ್**–ಉತ್ತಮವಾದ, **ಸರಿತ್**–ನದಿಯ, **ಅಮಲ**–ನಿರ್ಮಲವಾದ, **ಜಲ**–ನೀರಿನಲ್ಲಿ, **ಆಸೇಕ**–ಸ್ನಾನಮಾಡುವುದಕ್ಕಿಂತಲೂ, **ಸಾಧಿಕ್ಯ**–ಹೆಚ್ಚು ಪುಣ್ಯಪ್ರದವಾದ, **ಸಂಗಂ**–ಸಮಾನವುಳ್ಳ ನಿಮ್ಮನ್ನು, **ವಂದೇ**–ವಂದಿಸುತ್ತೇನೆ. ೪) **ದೇವ**–ಹೇ ಸ್ವಾಮಿ, **ಅಹಂ**–ನಾನು, ಭವ....ದಹನಂ—**ಭವ**–ಸಂಸಾರದ, **ಭಯ**–ಹೆದರಿಕೆಯನ್ನು, **ದಹನಂ**–ಸುಟ್ಟುಹಾಕುವಂಥಾ, ಮತ್ತು **ಸಜ್ಜನಾನ್**–ಸಜ್ಜನರನ್ನು, **ಮೋದಯಂತಂ**–ಸಂತೋಷಪಡಿಸತಕ್ಕ, (ತ್ವಾ) ನಿಮ್ಮನ್ನು, **ಭಕ್ತ್ಯಾ**–ಭಕ್ತಿಯಿಂದ, **ವಂದೇ**–ವಂದಿಸುತ್ತೇನೆ.

**ತಾತ್ಪರ್ಯ**—ಹೇ ಮಧ್ವಾಚಾರ್ಯರೇ, ರುದ್ರೇಂದ್ರಾದಿ ದೇವತೆಗಳಿಂದಲೂ, ಸಕಲೇಂದ್ರಿಯಾಭಿಮಾನಿ ದೇವತೆಗಳಿಂದಲೂ ಗಂಧರ್ವರು ಅಪ್ಸರೆಯರೇ ಮೊದಲಾದ ದೇವತಾಗಣಗಳಿಂದಲೂ ಸ್ತುತ್ಯರಾದ ಹೇ ಪೂರ್ಣ-ಪ್ರಜ್ಞರೇ ನಿಮಗೆ ನಮಸ್ಕಾರ. ಹೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರೇ ನೀವು ಶ್ರೀ ಮಹಾವಿಷ್ಣುವಿನಲ್ಲಿ ನಿರವಧಿಕವಾದ ಭಕ್ತಿಯನ್ನೂ ಅದೇ ರೀತಿ ಲಕ್ಷ್ಮೀದೇವಿಯಲ್ಲಿ ಹೆಚ್ಚು ಭಕ್ತಿಯನ್ನೂ ಸದಾ ಮಾಡುವಿರಿ. ಇಂಥಾ ನಿಮಗೆ ನನ್ನ ನಮಸ್ಕಾರ. ಗಂಗಾನದಿಯಲ್ಲಿ ಸ್ನಾನಮಾಡುವುದಕ್ಕಿಂತಲೂ ಅನೇಕ ಪಟ್ಟು ಪುಣ್ಯವು ಕೇವಲ ನಿಮ್ಮ ಸ್ಮರಣೆಯಿಂದಲೇ ಲಭ್ಯವಾಗುತ್ತದೆ. ಇಂಥಾ ಪಾವನತಮವಾದ ಶರೀರವುಳ್ಳ ನಿಮಗೆ ಪುನಃ ನನ್ನ ನಮಸ್ಕಾರ. ಮೊರೆಹೊಕ್ಕ ಜನಗಳಿಗೆ ಸಂಸಾರ ಭಯವನ್ನು ಪರಿಹಾರಮಾಡಿ ಸಜ್ಜನರನ್ನು ಉದ್ಧಾರಮಾಡುವಂಥಾ ಹೇ ಮಧ್ವಾಚಾರ್ಯರೇ ನಿಮಗೆ ಅನಂತ ನಮಸ್ಕಾರಗಳು.

**ಸುಬ್ರಹ್ಮಣ್ಯಾಖ್ಯಸೂರೇಃ ಸುತ ಇತಿ ಸುಭೃಶಂ ಕೇಶವಾನಂದತೀರ್ಥ**
**ಶ್ರೀಮತ್ಪಾದಾಬ್ಜಭಕ್ತಃ ಸ್ತುತಿಮಕೃತ ಹರೇರ್ ವಾಯುದೇವಸ್ಯ ಚಾಸ್ಯ**

## ೫) ಶ್ಲೋಕ ೪೧ ಫಲಶ್ರುತಿ

**ಶ್ಲೋಕ ೪೧** (ಸುಬ್ರಹ್ಮಣ್ಯಾಖ್ಯ) ಈ ವಾಯುಸ್ತುತಿಯನ್ನು ರಚಿಸಿದ ಕವಿಗಳು ತಮ್ಮ ಪರಿಚಯವನ್ನು ಮಾಡಿಕೊಟ್ಟು ಈ ವಾಯುಸ್ತುತಿಯನ್ನು ಪಠಿಸಿದರೆ ಲಭಿಸುವ ಫಲವನ್ನು ವಿವರಿಸಿ ಈ ಸ್ತುತಿಯನ್ನು ಸಮಾಪ್ತಿ ಮಾಡುತ್ತಾರೆ.

**ಪ್ರಧಾನವಾಕ್ಯ**—೧) ಸುಬ್ರಹ್ಮಣ್ಯಾಖ್ಯ ಸೂರೇಃ ಸುತಃ ಹರೇಃ ವಾಯುದೇವಸ್ಯ ಚ ಸ್ತುತಿಂ ಅಕೃತ – ಸುಬ್ರಹ್ಮಣ್ಯ ಪಂಡಿತರ ಮಗನು ಶ್ರೀಹರಿಯ ಮತ್ತು ವಾಯುದೇವರ ಈ ಸ್ತುತಿಯನ್ನು ರಚಿಸಿದನು. ೨) ಯೇ ತು ಏತಯಾ ಅಮೂ ನಮಂತಿ, ಏತೇ ಮುಕ್ತಿಂ ವ್ರಜಂತಿ—ಯಾರು ಈ ಸ್ತುತಿಯಿಂದ ಇವರಿಬ್ಬರಿಗೂ ನಮಸ್ಕರಿಸುತ್ತಾರೋ ಅವರು ಮೋಕ್ಷಕ್ಕೆ ಹೋಗುತ್ತಾರೆ.

**ಅನ್ವಯಾರ್ಥ**—ಇತಿ-ಈ ಪ್ರಕಾರವಾಗಿ, ಸುಬ್ರ........ಸೂರೇ— **ಸುಬ್ರಹ್ಮಣ್ಯ**-ಆಖ್ಯ-ಸುಬ್ರಹ್ಮಣ್ಯ ಪಂಡಿತನೆಂದು ಹೆಸರುಳ್ಳ, **ಸೂರೇಃ**-ಪಂಡಿತರ, **ಸುತಃ**-ಮಗನು, **ಸುಭೃಶಂ**-ಬಹಳ ಹೆಚ್ಚಾಗಿ, **ಕೇಶವಾ**........ **ಭಕ್ತಃ**—**ಕೇಶವ**-ಶ್ರೀಮನ್ನಾರಾಯಣ, **ಆನಂದತೀರ್ಥ**-ಮಧ್ವಾಚಾರ್ಯರು, ಇವರಿಬ್ಬರ, **ಶ್ರೀಮತ್**-ಕಾಂತಿಯುತ್ತನಾದ, **ಪಾದಾಬ್ಜ**-ಪಾದಕಮಲಗಳ, **ಭಕ್ತಃ**-ಭಕ್ತನೂ ಆದ ತ್ರಿವಿಕ್ರಮ ಪಂಡಿತನು, **ಹರೇಃ**-ವಿಷ್ಣುವಿನ, **ಆಸ್ಯ**-ಈ, **ವಾಯುದೇವಸ್ಯ ಚ**-ವಾಯುದೇವರ, **ಸ್ತುತಿಂ**-ಸ್ತುತಿಯನ್ನು, **ಅಕೃತ**-ಮಾಡಿದನು. ೨) ತತ್ಪಾ....ದರೇಣ—**ತತ್**-ಆ ಹರಿವಾಯುಗಳಿಬ್ಬರ, **ಪಾದ**-ಪಾದಗಳನ್ನು, **ಅರ್ಚ**-ಅರ್ಚಿಸುವುದರಲ್ಲಿ, **ಆದರೇಣ**-ಶ್ರದ್ಧೆಯಿಂದ, ಗ್ರಥಿತ....ಮಾಲಯಾ—**ಗ್ರಥಿತ**-ರಚಿಸಿದ, **ಪದ**-ಶಬ್ದಗಳ, **ಲಸತ್**-ಶೋಭಿಸುವ, **ಮಾಲಯಾ**-ಹಾರವಾದ, **ಏತಯಾ ತು**-ಈ ಹರಿವಾಯುಸ್ತುತಿಯಿಂದ **ಯೇ**-ಯಾರು, **ಅಮೂ**-ಇವರಿಬ್ಬರನ್ನು, **ಸಂರಾಧ್ಯ**-ಚೆನ್ನಾಗಿ ಆರಾಧನೆ ಮಾಡಿ, **ನಮಂತಿ**-ವಂದಿಸುತ್ತಾರೋ, **ಏತೇ**-ಇವರು, ಪ್ರತತ....ಗುಣಾಃ—

**ತತ್ಪಾದಾರ್ಚಾದರೇಣ ಗ್ರಥಿತಪದಲಸನ್ ಮಾಲಯಾ ತ್ವೇತಯಾ ಯೇ**
**ಸಂರಾಧ್ಯಾಮೂ ನಮಂತಿ ಪ್ರತತಮತಿಗುಣಾ**
**ಮುಕ್ತಿಮೇತೇ ವ್ರಜಂತಿ ॥ ೪೧ ॥**

---

**ಪ್ರತತ**-ಪ್ರಕಟಿತವಾದ, **ಮತಿ**-ಬುದ್ಧಿಯೂ, (ಅಪರೋಕ್ಷಜ್ಞಾನವೂ), **ಗುಣಾಃ**-ಭಕ್ತಿ, ವೈರಾಗ್ಯಾದಿ ಗುಣಗಳುಳ್ಳವರಾಗಿ, **ಮುಕ್ತಿಂ**-ಮುಕ್ತಿಗೆ, **ವ್ರಜಂತಿ**-ಹೋಗುತ್ತಾರೆ.

**ತಾತ್ಪರ್ಯ**—ಸುಬ್ರಹ್ಮಣ್ಯ ಪಂಡಿತರ ಮಗನಾದ ತ್ರಿವಿಕ್ರಮ ಪಂಡಿತ ನೆಂಬ ವಿಪ್ರೋತ್ತಮನು ಶ್ರೀ ಹರಿಯ ಮತ್ತು ಅವನ ಭಕ್ತಾಗ್ರೇಸರರಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಪಾದಪದ್ಮಗಳ ಭಕ್ತನಾಗಿ ದ್ದಾನೆ. ಅವನು ಆ ಹರಿ-ವಾಯುಗಳಿಬ್ಬರಲ್ಲೂ ಪರಮಶ್ರದ್ಧೆಯುಳ್ಳವನಾಗಿ ಹರಿ ಮತ್ತು ವಾಯು ಇಬ್ಬರಿಗೂ ಅನ್ವಯಿಸುವ ಈ ಶ್ರೀಹರಿವಾಯುಸ್ತುತಿ ಯನ್ನು ರಚಿಸಿದನು. ಯಾವ ಭಕ್ತರು ಪರಮ ಶ್ರದ್ಧೆಯಿಂದ ರಚಿಸಿರುವ ಈ ಪದಗಳ ಮಾಲಾರೂಪವಾದ ಈ ಸ್ತುತಿಯಿಂದ ಶ್ರದ್ಧಾಭಕ್ತಿ ಸಮನ್ವಿತರಾಗಿ ಆರಾಧಿಸಿ ವಂದಿಸುತ್ತಾರೋ ಅವರಿಗೆ ವೈರಾಗ್ಯಃ ಭಕ್ತಿ ಶಮ-ದಮಾದಿ ಗುಣ ಗಳು ಬೆಳೆದು, ಅದರಿಂದ ಮೊದಲು ಅಪರೋಕ್ಷ ಜ್ಞಾನವೂ ಅನಂತರ ಬಿಂಬಾ ಪರೋಕ್ಷವೂ ಆಗಿ ಮುಕ್ತಿಗೆ ಭಾಗಿಗಳಾಗುತ್ತಾರೆ.

(ವಾಯುಸ್ತುತಿ ಮುಗಿದ ಮೇಲೆ ಸಂಪುಟಾಕಾರವಾಗಿ ಪುನಃ ಇನ್ನೊಮ್ಮೆ ನಖಸ್ತುತಿಯ ಎರಡು ಶ್ಲೋಕಗನ್ನು ಓದಬೇಕು.)

॥ ಶ್ರೀಕೃಷ್ಣಾರ್ಪಣಮಸ್ತು ॥

ಇತಿ ಶ್ರೀಮತ್ಕವಿಕುಲತಿಲಕ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ ಹರಿವಾಯುಸ್ತುತಿಃ ಸಮಾಪ್ತಾ

ಇಲ್ಲಿಗೆ ಶ್ರೀಹರಿವಾಯುಸ್ತುತಿಯ ಸರಳಭಾವಾರ್ಥವು ಸಂಪೂರ್ಣವಾಯಿತು

**ಸಮರ್ಪಣೆ**

ಇತಿ ವಾಯುಸ್ತುತೇರರ್ಥ ಸುಬೋಧ್ಯಃ ಸರಲಸ್ತಥಾ ।
ಕಥಿತೋ ವಿಷ್ಣುತೀರ್ಥೇನ ಪ್ರೀತ್ಯೈ ಮಾಧವ ಮಧ್ವಯೋಃ ॥

ಅರ್ಥ :— ಈ ಪ್ರಕಾರ ವಾಯುಸ್ತುತಿಗೆ ಸುಖವಾಗಿ ತಿಳಿಯುವ ಸರಲಾರ್ಥವು ಶ್ರೀ ಮಾಧವ ಮತ್ತು ಮಧ್ವಾಚಾರ್ಯರ ಪ್ರೀತ್ಯರ್ಥವಾಗಿ ವಿಷ್ಣುತೀರ್ಥರಿಂದ ಹೇಳ ಲ್ಪಟ್ಟಿತು.

॥ ಹರಿಃ ಓಂ ॥

# ವಾಯುಸ್ತುತಿ ಪುನಶ್ಚರಣೆ ಫಲ

| | | |
|---|---|---|
| ನಖಸ್ತುತಿ ಪಾಂತ್ವಸ್ಮಾನ್–ಲಕ್ಷ್ಮೀಕಾಂತ | .... | ಮೋಕ್ಷಸಿದ್ಧಿ ಫಲ |
| 1. ಶ್ರೀಮದ್ವಿಷ್ಣ್ವಂಘ್ರಿ | .... | ವಾಕ್‌ಸಿದ್ಧಿ ಫಲ ಅಥವಾ ಸರ್ವಾಭೀಷ್ಟ ಸಿದ್ಧಿ |
| 2. ಉತ್ಕಂಠಾಕುಂಠ | .... | ಪ್ರಜ್ಞಾ (ಜ್ಞಾನ) ಲಾಭ |
| 3. ಜನ್ಮಾಧಿವ್ಯಾಧ್ಯುಪಾದಿ | .... | ಸಕಲ ಆದಿ ಮಹಾವ್ಯಾಧಿ ಪೀಡಾಪರಿಹಾರ |
| 4. ಅಸ್ಯಾವಿಷ್ಕರ್ತುಕಾಮಂ | .... | ಮಂತ್ರಸಿದ್ಧಿ ಅಥವಾ ಜಯಸಿದ್ಧಿ |
| 5 ಉದ್ಯದ್ವಿದ್ಯುತ್ಪ್ರಚಂಡಾಂ | .... | ಪರಾಕ್ರಮ ಮತ್ತು ಬುದ್ಧಿವೈಶದ್ಯ ಸಿದ್ಧಿ |
| 6. ಸಂಸಾರೋತ್ತಾಪನಿತ್ಯೋ | .... | ಸ್ನೇಹ ಮತ್ತು ಪುಣ್ಯಲಾಭ |
| 7. ಮೂರ್ಧನ್ಯೇಷೋಽಂಜಲಿರ್ಮೇ | .... | ಬಂಧಮೋಕ್ಷ, ಶರೀರ ದಾರ್ಢ್ಯ ಸಿದ್ಧಿ |
| 8. ಸಾಭ್ರೋಷ್ಣಾಭೀಷು ಶುಭ್ರ | .... | ತನ್ನ ಹುಚ್ಚುತನ ಪರಿಹಾರ ಮತ್ತು ಪರರಿಗೆ ಉನ್ಮಾದ ಪ್ರಾಪ್ತಿ |
| 9. ಯೇಽಮುಂ ಭಾವಂ ಭಜಂತೇ | .... | ವಶ್ಯಳಾಗದ ರಮಣಿಯೂ ವಶಳಾಗುವಳು |
| 10. ಆನಂದಾನ್ಮಂದ ಮಂದಾದದತಿ | .... | ಸಂತಾನಲಾಭ, ಸುಖಲಾಭ |
| 11. ಉತ್ತಪ್ತಾತ್ಯುತ್ಕಟತ್ವಿಟ್ | .... | ಶತ್ರುಜಯ ಸಿದ್ಧಿ |
| 12. ಅಸ್ಮಿನ್ ಸ್ಮದ್ಗುರೂಣಾಂ | .... | ಕ್ಲೇಶಪರಿಹಾರ, ಹರಿಭಕ್ತಿ ಸಿದ್ಧಿ |

| | | | |
|---|---|---|---|
| 13. | ಕ್ಷುತ್ ಕ್ಷಾಮಾನ್ | .... | ದಾರಿದ್ರ್ಯ ಪರಿಹಾರ ಮತ್ತು ಶತ್ರುಮೋಹನ |
| 14. | ಮಾತರ್ಮೇ ಮಾತರಿಶ್ವನ್ಪಿತರ | .... | ಪಿತೃ, ಮಾತೃಭಕ್ತಿ ಮತ್ತು ಜನವಶೀಕರಣ ಸಿದ್ಧಿ |
| 15. | ವಿಷ್ಣೋರತ್ಯುತ್ತಮತ್ವಾದಖಿಲ | .... | ಹರಿಭಕ್ತಿ ಸಿದ್ಧಿ |
| 16. | ತತ್ತ್ವಜ್ಞಾನ್ ಮುಕ್ತಿಭಾಜಃ | .... | ಮೋಕ್ಷಸಿದ್ಧಿ |
| 17. | ವಂದೇಽಹಂ ತಂ ಹನುಮಾನಿತಿ | .... | ಪರಾಕ್ರಮಸಿದ್ಧಿ |
| 18. | ಪ್ರಾಕ್ ಪಂಚಾಶತ್ಸಹಸ್ರೈ | .... | ಔಷಧ ಸಿದ್ಧಿ |
| 19. | ಕ್ಷಿಪ್ತಃ ಪಶ್ಚಾತ್ಸಲೀಲಂ | .... | ಸ್ಥಿರಪ್ರಯೋಜನ ಸಿದ್ಧಿ, ಯುದ್ಧ ಭಗ್ನಾಂಗ ಲಾಭ, ಕೈ ತಪ್ಪಿದ ರಾಜ್ಯದ ಪುನರ್ಲಾಭ |
| 20. | ದೃಷ್ಟ್ವಾದುಷ್ಟಾದಿಪೋರಃ | .... | ಯುದ್ಧ ಜಯಸಿದ್ಧಿ |
| 21. | ದೇವ್ಯಾ ದೇಶಪ್ರಣೀತಿದ್ರುಹಿಣ | .... | ಪತ್ನೀ ಪುತ್ರಾದಿಗಳ ಅಗಲುವಿಕೆಯ ದೋಷ ನಿವೃತ್ತಿ, ನಷ್ಟದ್ರವ್ಯ ಪ್ರಾಪ್ತಿ |
| 22. | ಜಘ್ನೇ ನಿಘ್ನೇನ ವಿಘ್ನೋ | .... | ವಿಘ್ನ ಪರಿಹಾರ ಮತ್ತು ದುಷ್ಟ ನಿಗ್ರಹ |
| 23. | ನಿರ್ವ್ಯಾದ್ಧನ್ನತ್ಯಯತ್ನಂ | .... | ಯುದ್ಧ ಸನ್ನಾಹ ಸಿದ್ಧಿ |
| 24. | ಕ್ಷ್ವೇಲಾಕ್ಷೀಣಾಟ್ಟಹಾಸಂ | .... | ರಾಜರು ವಶ್ಯರಾಗುವರು-ರಾಜಸೇವಾ ಲಾಭವಾಗುವುದು |
| 25. | ದ್ರುಹ್ಯಂತೀಂ ಹೃದ್ರುಹಂ ಮಾಂ | .... | ವಾಕ್ಪಟುತ್ವ ಕವಿತ್ವ ಶಕ್ತಿಸಿದ್ಧಿ, ಅಜ್ಞಾನ ನಾಶ |
| 26. | ಯಾಭ್ಯಾಂ ಶುಶ್ರೂಷುರಾಸೀ | .... | ಗುರುಸೇವಾ ಸಿದ್ಧಿ |
| 27. | ಗಚ್ಛನ್ಸೌಗಂಧಿಕಾರ್ಥಂ | .... | ಜ್ಞಾನಸಿದ್ಧಿ, ಕಾರ್ಯಸಿದ್ಧಿ |

28. ಬಹ್ವೀಃ ಕೋಟೀರಟೀಕಃ .... ಮಿಥ್ಯಾಪವಾದ ಪರಿಹಾರ
29. ದೇಹಾದುತ್ಕ್ರಾಮಿತಾನಾಮಧಿ .... ಜನವಶೀಕರಣ ಸಿದ್ಧಿ
30. ತದ್ದುಷ್ಪ್ರೇಕ್ಷಾನುಸಾರಾತ್ಕತಿಪಯ .... ಪ್ರತಿವಾದಿ ಜಯಸಿದ್ಧಿ
31. ಆಕ್ರೋಶಂತೋನಿರಾಶಾ .... ಶತ್ರೂಚ್ಚಾಟನ
32. ತ್ರಿಷ್ವಹ್ಯೇವಾವತಾರೇಷ್ವರಿ .... ಅಪಮೃತ್ಯು ಪರಿಹಾರ ಮತ್ತು ಸರ್ವರಿಂದಲೂ ಶ್ರೇಷ್ಠತ್ವ ಸಿದ್ಧಿ

33. ಉದ್ಯನ್ಮಂದಸ್ಮಿತ ಶ್ರೀ .... ರೂಪಲಾವಣ್ಯ ವೃದ್ಧಿ
34. ಪ್ರಾಚೀನಾಚೀರ್ಣಪುಣ್ಯೋಚ್ಚಯ .... ಅಗಲಿದ ಪತ್ನೀ ಪುತ್ರಾದಿಗಳ ಸಂಬಂಧ
35. ಪೀಠೇರತ್ನೋಪಕ್ಲೃಪ್ತೇ .... ಮಹದೈಶ್ವರ್ಯ ಲಾಭ, ಸರ್ವಾಧಿಕ್ಯ ಸಿದ್ಧಿ
36. ಸಾನುಕ್ರೋಶೈರಜಸ್ರಂ .... ವೈರಾಗ್ಯ, ಸತ್ಪುತ್ರ ಲಾಭ
37. ಅಸ್ತವ್ಯಸ್ತಂ ಸಮಸ್ತಶ್ರುತಿ .... ವಸ್ತು ಸಿದ್ಧಿ
38. ಆಜ್ಞಾಮನ್ಯೈರಧಾರ್ಯಾಂ .... ರಾಜ ಪ್ರತಿಬಂಧ ನಿವೃತ್ತಿ, ನಿಕ್ಷೇಪ ಸಂದರ್ಶನ
39. ಭೂತ್ವಾ ಕ್ಷೇತ್ರೇ ವಿಶುದ್ಧೇ .... ಸಂತಾನಲಾಭ
40. ವಂದೇ ತಂ ತ್ವಾಂ ಸುಪೂರ್ಣ .... ಗ್ರಹಪೀಡಾ ಪರಿಹಾರ, ರಾಜಬಂಧನ ಪರಿಹಾರ (ಸರ್ವಾಭೀಷ್ಟ ಸಿದ್ಧ್ಯರ್ಥಂ)

41. ಸುಬ್ರಹ್ಮಣ್ಯಾಖ್ಯ ಸೂರೇಃ .... ಜ್ಞಾನ, ಭಕ್ತಿ, ವೈರಾಗ್ಯ, ಮೋಕ್ಷ ಲಾಭ ಗ್ರಹ, ರಾಜ, ಚೋರ, ವ್ಯಾಘ್ರಾದ್ಯುಪದ್ರ ಪರಿಹಾರಾರ್ಥಂ

ಅಥ

# ಖಿಲವಾಯುಸ್ತುತಿ

**ವಾಯುರ್ಭೀಮೋ ಭೀಮನಾದೋ ಮಹೌಜಾಃ ಸರ್ವೇಷಾಂ ಚ**
**ಪ್ರಾಣಿನಾಂ ಪ್ರಾಣಭೂತಃ ।**
**ಅನಾವೃತ್ತಿರ್ದೇಹಿನಾಂ ದೇಹಪಾತೇ, ತಸ್ಮಾದ್**
**ವಾಯುರ್ದೇವದೇವೋ ವಿಶಿಷ್ಟಃ ॥ ೧ ॥**

---

ಮಂಗಲಾಚರಣೆ

ನಾರಾಯಣಂ ನಮಸ್ಕೃತ್ಯ ಗುರೂಂಶ್ಚ ಸಕಲಾಂಸ್ತಥಾ ।
ಖಿಲವಾಯುಸ್ತುತೇರರ್ಥಂ ಕಥಯಾಮಿ ಯಥಾಮತಿ ॥

ಅರ್ಥ :—ಭಗವಂತನಾದ ಶ್ರೀಮನ್ನಾರಾಯಣನಿಗೆ ಭಕ್ತ್ಯಾದರದಿಂದ ನಮಸ್ಕಾರಮಾಡಿ ಹಾಗೆಯೇ ಶ್ರೀಮಧ್ವಾಚಾರ್ಯಾದಿ ಸಕಲ ಗುರುಗಳಿಗೂ ತಾರತಮ್ಯ ಪ್ರಕಾರ ವಂದಿಸಿ ಖಿಲವಾಯುಸ್ತುತಿಯ ಶ್ಲೋಕಗಳಿಗೆ ಸರಳಾರ್ಥವನ್ನು ಹೇಳುತ್ತೇನೆ.

**ಖಿಲವಾಯುಸ್ತುತಿ ಎಂದರೇನು ? 'ಖಿಲ'** ಎಂದರೆ ಬಿಡಿ-ಬಿಡಿಯಾದ ಚೂರುಚೂರಾದ ಎಂದರ್ಥ. ವಾಯುಸ್ತುತಿಯು ಹೇಗೆ ಒಬ್ಬರಿಂದಲೇ ರಚಿತ ವಾಯಿತೋ ಹಾಗೆ ಈ ಶ್ಲೋಕಗಳು ಒಬ್ಬರಿಂದ ರಚಿತವಾದುದಲ್ಲ ; ಬಿಡಿ-ಬಿಡಿ ಯಾಗಿ ಯಾವಯಾವುದೋ ಗ್ರಂಥಗಳಿಂದ ಆರಿಸಿದ ಶ್ಲೋಕಗಳಾದ್ದರಿಂದಲೂ ಪರಂಪರಾಗತವಾಗಿ ಈ ಕ್ರಮದಲ್ಲೇ ವಾಯುಸ್ತುತಿಯು ಮುಗಿದ ಬಳಿಕ ವಾಯುಸ್ತುತಿಗೆ ಅನುಬಂಧರೂಪವಾಗಿ ಈ ಬಿಡಿಬಿಡಿ ಶ್ಲೋಕಗಳನ್ನು ಹೇಳುತ್ತಾ ಬಂದಿರುವುದರಿಂದ ಈ ಶ್ಲೋಕಗಳಿಗೆ '**ಖಿಲವಾಯುಸ್ತುತಿ**' ಎಂಬ ಹೆಸರು ಬಂದಿದೆ.

**ಶ್ಲೋಕ ೧**—(ವಾಯುರ್ಭೀಮೋ) ಈ ಶ್ಲೋಕವು ವಾಯುದೇವರು (ಹರಿಯನ್ನು ಬಿಟ್ಟು) ಸರ್ವ ದೇವೋತ್ತಮ ಎಂಬುದನ್ನು ಸಯುಕ್ತಿಕವಾಗಿ ಸಾಧಿಸಿ ತೋರಿಸುತ್ತದೆ. ಈ ಶ್ಲೋಕವು ಶ್ರೀಮದಾಚಾರ್ಯರಿಂದಲೇ

ತಾತ್ಪರ್ಯನಿರ್ಣಯದಲ್ಲೂ ಭಾಗವತ ತಾತ್ಪರ್ಯದಲ್ಲೂ 'ಮೋಕ್ಷಧರ್ಮ' ಎಂಬ ಮಹಾಭಾರತದ ಶಾಂತಿಪರ್ವದ ಒಂದು ಉಪಪರ್ವದಿಂದ ಆರಿಸಿ ಉದ್ಧೃತವಾಗಿದೆ. ಈ ಶ್ಲೋಕ ಶಾಲಿನೀವೃತ್ತದಲ್ಲಿದೆ.

**ಅನ್ವಯಾರ್ಥ—ವಾಯುಃ**-ಮುಖ್ಯಪ್ರಾಣದೇವರು, **ಭೀಮಃ**-(ಅಸುರರಿಗೆ) ಭಯಂಕರ, ಭೀಮನಾದಃ—**ಭೀಮ**-ಭಯಂಕರವಾದ, **ನಾದಃ**-ಧ್ವನಿಯುಳ್ಳವನು, (ಅಥವಾ ಯಮಭಟರಿಗೂ ಭಯಂಕರವಾದ) 'ಪ್ರಾಣ ಘೋಷ'ವುಳ್ಳವನು, ಮಹೌಜಾಃ—**ಮಹಾ**-ಅತ್ಯಧಿಕವಾದ, **ಓಜಾಃ**-ಬಲ ಉಳ್ಳವನೂ ಪರಾಕ್ರಮಶಾಲಿಯೂ ಆಗಿದ್ದಾನೆ. **ಸರ್ವೇಷಾಂ ಚ**-ಸ್ಥಾವರ-ಜಂಗಮಾತ್ಮಕವಾದ ಸಕಲ, **ಪ್ರಾಣಿನಾಂ**-ಪ್ರಾಣಿಗಳಿಗೂ, ಪ್ರಾಣಭೂತಃ—**ಪ್ರಾಣ**-=(೧) ಉಸಿರಾಟಕ್ಕೂ, (೨) ಸಕಲ ವಿಧವಾದ ಚಲನಗಳಿಗೂ, **ಭೂತಃ**-ಆಧಾರರೂಪನಾಗಿದ್ದಾನೆ. **ದೇಹಿನಾಂ**-ಪ್ರಾಣಿಗಳ, ದೇಹಪಾತೇ—**ದೇಹ**-ಶರೀರವು, **ಪಾತೇ**-ಬಿದ್ದುಹೋಗಲು (ಪ್ರಾಣಹೋಗಲು ಅಥವಾ ಮರಣ ಸಂಭವಿಸಲು), **ಅನಾವೃತ್ತಿಃ**-(೧) ಪ್ರಾಣವು ಹಿಂದಿರುಗಿ ಬರುವುದಿಲ್ಲ (೨) (ಅಥವಾ) **ಅನ**-ಉಸಿರಿನ (ಶ್ವಾಸದ), **ಅವೃತ್ತಿಃ**-ಇಲ್ಲದಿರುವಿಕೆ ಮೊದಲು ಗೊತ್ತಾಗುತ್ತದೆ. (ಅಥವಾ ೩ನೇ ಅರ್ಥ) **ದೇಹಿನಾಂ**-ಸಾಧನ ಜೀವಿಗಳ, **ದೇಹಪಾತೇ**-ಚರಮದೇಹವು ಬಿದ್ದುಹೋಗಲು, **ಅನಾವೃತ್ತಿಃ**-ಪುನಃ ಸಂಸಾರಕೂಪಕ್ಕೆ ಹಿಂದಿರುಗುವುದಿಲ್ಲ, ಪುನರ್ಜನ್ಮವಿಲ್ಲ. (ಅಥವಾ ೪ನೇ ಅರ್ಥ) **ದೇಹಿನಾಂ**-ಪ್ರಾಣಿಗಳ, **ದೇಹಪಾತೇ**-ಮರಣ ಸಂಭವಿಸಲು, **ಅನಾವೃತ್ತಿಃ**-ವಾಯುದೇವರು ಮಾತ್ರ ಜೀವನನ್ನು ಬಿಟ್ಟು ಹೋಗುವುದಿಲ್ಲ, ಮಿಕ್ಕ ಸಕಲೇಂದ್ರಿಯಾಭಿಮಾನಿಗಳೂ ಜೀವನ ಹಿಂದೆ ಇರುವುದಿಲ್ಲ. **ತಸ್ಮಾತ್**-ಆದ್ದರಿಂದ, **ವಾಯುಃ**-ವಾಯುದೇವರು, **ದೇವದೇವಃ**-ರುದ್ರಾದಿ ಸಮಸ್ತ ದೇವತೆಗಳಿಗಿಂತಲೂ ಮುಖ್ಯಸ್ಥನೂ, **ವಿಶಿಷ್ಟಃ**-ವಿಶೇಷ ಮಹಿಮೆಯುಳ್ಳವನೂ ಆಗಿದ್ದಾನೆ.

**ತಾತ್ಪರ್ಯ**—ಈ ಶ್ಲೋಕವು ರುದ್ರಾದಿ ಸಕಲ ದೇವತೆಗಳಿಗಿಂತಲೂ ವಾಯುದೇವರೆಂಬ ಮುಖ್ಯಪ್ರಾಣನೇ ಶ್ರೇಷ್ಠ—ಅವರೇ ಜೀವೋತ್ತಮರು

**ಪ್ರಥಮೋ ಹನುಮನ್ನಾಮಾ ದ್ವಿತೀಯೋ ಭೀಮ ಏವ ಚ ।**
**(ಪಾಠಾಂ. ಹನುಮಾನ್ ನಾಮ)**
**ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥ ೨ ॥**

---

ಎಂಬ ವಿಷಯವನ್ನು ಅನೇಕ ಯುಕ್ತಿಗಳಿಂದ ಸಿದ್ಧಮಾಡಿಕೊಡುತ್ತದೆ. (೧) ರುದ್ರೇಂದ್ರಾದಿ ಮಿಕ್ಕ ಎಲ್ಲ ದೇವತೆಗಳಿಗಿಂತಲೂ ವಾಯುದೇವರ ಬಲವೂ ಜ್ಞಾನವೂ ಅತ್ಯಧಿಕವಾಗಿದೆ. ಅದು ಅವರ ಭೀಮನಾದದಿಂದಲೇ ಗೊತ್ತಾಗುತ್ತದೆ. (೨) ಪ್ರಾಣಿಗಳ ಬದುಕಿಗೆ (ಜೀವಂತವಾಗಿರುವುದಕ್ಕೆ) ಪ್ರಾಣದೇವರೇ ಮುಖ್ಯ, ಅವರು ಶ್ವಾಸೋಚ್ಛ್ವಾಸ ನಡೆಸಿದರೆ ಮಾತ್ರವೇ ಬದುಕಬಲ್ಲ. ಬೇರೆ ಯಾರೂ ಪ್ರಾಣಾಧಾರವಲ್ಲ. (೩) ಪ್ರಾಣದೇವರು ದೇಹದಲ್ಲಿ ಇದ್ದರೆ ಮಾತ್ರ ಕಣ್ಣು ಕಿವಿ ಮೊದಲಾದ ಸಕಲಾಂಗಗಳೂ ಕೆಲಸಮಾಡುತ್ತವೆ. ಪ್ರಾಣದೇವರೇ ಇಲ್ಲದಿದ್ದರೆ ಬೇರೆ ಯಾವ ಅಂಗವೂ ಕೆಲಸಮಾಡಲಾರದು. ಅವನ ದೇಹ ಶವ (ಹೆಣ)ವಾಗುತ್ತದೆ. (೪) ಕಿವಿ, ಕಣ್ಣು ಇತ್ಯಾದಿ ಬೇರೆ ಅಂಗಗಳು ಇಲ್ಲದೆ ಇದ್ದರೂ, ಕಿವುಡ ಕುರುಡ ಎನ್ನಿಸಿಕೊಂಡರೂ ಬದುಕಿದ್ದಾನೆ ಎನ್ನಿಸುತ್ತದೆಯೇ ಹೊರತು ಜೀವ ಹೋಯಿತು ಎನ್ನಿಸುವುದಿಲ್ಲ, ಶವ ಎನ್ನಿಸುವುದಿಲ್ಲ (೫) ಪ್ರಾಣ ಹೋದುದಕ್ಕೆ ಮೊದಲ ಹೆಗ್ಗುರುತು ಉಸಿರಾಟ (ಪ್ರಾಣ) ನಿಲ್ಲುವುದೇ ಆಗಿದೆ (ಅನ–ಅವೃತ್ತಿಃ). (೬) ಮರಣ ಸಂಭವಿಸಿದ ಕೂಡಲೆ ದೇಹದಲ್ಲಿದ್ದ ಕಣ್ಣು ಕಿವಿ ಮೊದಲಾದ ಎಲ್ಲ ಇಂದ್ರಿಯಾಭಿಮಾನಿಗಳೂ ತಮ್ಮ ತಮ್ಮ ಮೂಲರೂಪದೊಡನೆ ಸೇರುತ್ತಾರೆಯೇ ಹೊರತು ಜೀವನ ಹಿಂದೆ ಹೋಗುವುದಿಲ್ಲ. ಇದಕ್ಕೆ ಪ್ರತಿಯಾಗಿ ಪ್ರಾಣದೇವರೊಬ್ಬರು ಮಾತ್ರ! ಭಗವಂತನ (ಬಿಂಬರೂಪಿಯ) ಜೊತೆ ಜೀವನ ಹಿಂದೆಯೇ ಇದ್ದು ಮುಂದಿನ ಜನ್ಮ ಬಂದಾಗಲೂ ಬರುತ್ತಾರೆ. ಹೀಗೆ ಲಿಂಗದೇಹ ಕಳಚುವವರೆಗೂ ಜೀವನ ಹಿಂದೆಯೇ ಇರುತ್ತಾರೆ. ಈ ಎಲ್ಲ ಕಾರಣಗಳಿಂದ ಪ್ರಾಣದೇವರೇ ರುದ್ರಾದಿಗಳಿಗಿಂತ ಶ್ರೇಷ್ಠರೆಂಬುದು ಮಾತ್ರವಲ್ಲ—ಅವರ ಹಿರಿಮೆಯೇ (ವೈಶಿಷ್ಟ್ಯವೇ) ಬೇರೆ ಎಂಬುದೂ ಸಿದ್ಧವಾಗುತ್ತದೆ.

**ಶ್ಲೋಕ ೨**—(ಪ್ರಥಮೋ) ಹಿಂದಿನ ಶ್ಲೋಕವು ವಾಯುದೇವರ ಹಿರಿಮೆಯನ್ನು ವರ್ಣಿಸಿದರೆ ಈ ಶ್ಲೋಕವು ಅವರ ಅವತಾರತ್ರಯದ ಮಹಿಮೆ

ಯನ್ನು ತಿಳಿಸುತ್ತದೆ. ಈ ಶ್ಲೋಕವನ್ನೂ ಆಚಾರ್ಯರೇ ತಾತ್ಪರ್ಯ ನಿರ್ಣಯದಲ್ಲಿ (೨ ಅಧ್ಯಾ. ೧೨೯ ಶ್ಲೋ) ಯಾವುದೋ ಗ್ರಂಥದಿಂದ ಉದ್ಧರಿಸಿದ್ದಾರೆ.

**ಅನ್ವಯಾರ್ಥ—ಪ್ರಥಮಃ**–(ವಾಯುದೇವರ) ಮೊದಲನೆಯ (ಅವತಾರವು), **ಹನುಮಾನ್ ನಾಮ**–(ಅಥವಾ ಹನುಮನ್ನಾಮಾ)–ಹನುಮಾನ್ ಎಂದು ಹೆಸರುಳ್ಳದ್ದು ಅಥವಾ ಹನುಮಂತನೆಂದು ಪ್ರಸಿದ್ಧವಾದುದು. **ದ್ವಿತೀಯಃ**–ಎರಡನೆಯ ಅವತಾರವು, **ಭೀಮಃ ಏವ ಚ**–ಭೀಮ ಎಂಬುದು, **ತೃತೀಯಃ ತು**–ಮೂರನೆಯದಾದರೋ, **ಪೂರ್ಣಪ್ರಜ್ಞಃ**–ಪೂರ್ಣಪ್ರಜ್ಞ ಎಂಬುದು. ಮೂರು ಅವತಾರವೂ–**ಭಗವತ್-ಸಾಧಕಃ—ಭಗವತ್**–ಶ್ರೀಹರಿಯ, **ಕಾರ್ಯ**–ಕಾರ್ಯವನ್ನು, **ಸಾಧಕಃ**–ಸಾಧನೆಮಾಡಿದಂಥದು. (ವಿಶೇಷಾರ್ಥ—'ತು' ಎಂಬ ಅವ್ಯಯವು ಭಿನ್ನತೆಯನ್ನು ತೋರಿಸುತ್ತದೆ. ಮೊದಲ ಎರಡು ಅವತಾರಗಳೂ ಬಲಕಾರ್ಯಪ್ರಧಾನವಾದರೆ ಮೂರನೆಯ ಅವತಾರವು ಜ್ಞಾನಕಾರ್ಯಸಾಧಕ ಎಂಬ ಭಿನ್ನತೆಯನ್ನು ಸೂಚಿಸುತ್ತದೆ.)

**ತಾತ್ಪರ್ಯ**—ಆ ವಾಯುದೇವರು ಭಗವತ್ಕಾರ್ಯಸಾಧನೆಗಾಗಿಯೇ ತ್ರೇತ, ದ್ವಾಪರ ಮತ್ತು ಕಲಿಯುಗಗಳಲ್ಲಿ ಅವತಾರಮಾಡಿದರು. ಮೊದಲನೆಯ ಅವತಾರವೇ ಹನುಮಾನ್. ಈ ರೂಪದಿಂದ ಶ್ರೀರಾಮನ ಕಾರ್ಯವನ್ನು ಸಾಧಿಸಿದರು. ಎರಡನೆಯ ಅವತಾರವೇ ಭೀಮ. ಈ ರೂಪದಿಂದ ಶ್ರೀಕೃಷ್ಣನ ಕಾರ್ಯವನ್ನು ಸಾಧಿಸಿದರು. ಈ ಎರಡೂ ಬಲಪ್ರಧಾನ. ಮೂರನೆಯ ಅವತಾರವು ಪೂರ್ಣಪ್ರಜ್ಞ ಎಂದು ಪ್ರಸಿದ್ಧವಾಗಿದೆ. ಈ ಹೆಸರೇ ಹೇಳುವಂತೆ (**ಪೂರ್ಣ**–ಪರಿಪೂರ್ಣವಾದ, **ಪ್ರಜ್ಞಾ**–ಬುದ್ಧಿ ಅಥವಾ ಜ್ಞಾನವುಳ್ಳವರು) ಈ ಅವತಾರವು ಜ್ಞಾನಕಾರ್ಯಪ್ರಚುರವಾದುದು. ಈ ಅವತಾರದಲ್ಲಿ ವೇದವ್ಯಾಸರಿಗೆ ಅತ್ಯಂತ ಪ್ರಿಯವಾದ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದು ಇಪ್ಪತ್ತೊಂದು ದುರ್ಭಾಷ್ಯಗಳನ್ನು ಖಂಡಿಸಿದರು. ಹೀಗೆ ಮೂರು ಅವತಾರಗಳಲ್ಲೂ ಭಗವಂತನ ರಾಮ-ಕೃಷ್ಣ-ವೇದವ್ಯಾಸರೆಂಬ ರೂಪಗಳ ಕಾರ್ಯವನ್ನು ಸಾಧಿಸಿದರು.

**ಬ್ರಹ್ಮಾಂತಾ ಗುರವಃ ಸಾಕ್ಷಾ-ದಿಷ್ಟಂ ದೈವಂ ಶ್ರಿಯಃ ಪತಿಃ ।**
**ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥ ೩ ॥**

---

**ಶ್ಲೋಕ ೩**—(ಬ್ರಹ್ಮಾಂತಾಃ) ಈ ಶ್ಲೋಕದ ಮೂಲ ಆಕಾರ ಸಿಕ್ಕಿಲ್ಲ. ಯಾರೋ ಹಿರಿಯ ಮಾಧ್ವಭಕ್ತರು ತಮ್ಮ ಅಭಿಲಾಷೆ ಹೀಗಿದೆಯೆಂದು ಹೇಳಿ 'ಸಕಲ ವೈಷ್ಣವರೂ ಹೀಗೆಯೇ ಹಾರೈಸಲಿ' ಎಂದು ಮಾರ್ಗದರ್ಶನ ಮಾಡಿದ್ದಾರೆ.

**ಅನ್ವಯಾರ್ಥ**—ಬ್ರಹ್ಮಾಂತಾಃ—**ಬ್ರಹ್ಮಾ**-ಚತುರ್ಮುಖ ಬ್ರಹ್ಮನೇ, **ಅಂತಾಃ**-ಕೊನೆಯಾಗಿರುವ ಹಿರಿಯರೆಲ್ಲರೂ, **ಗುರವಃ**-ಗುರುಗಳೂ, **ಶ್ರಿಯಃ**-ಲಕ್ಷ್ಮೀದೇವಿಯ, **ಪತಿಃ**-ಒಡೆಯನಾದ ಶ್ರೀವಿಷ್ಣುವೇ, **ಸಾಕ್ಷಾತ್**-ಪ್ರತ್ಯಕ್ಷವಾಗಿ, **ಇಷ್ಟಂ**-ಪ್ರಿಯನಾದ, **ದೈವಂ**-ದೇವರೂ, **ಶ್ರೀಮದಾಚಾರ್ಯಾಃ**-ಶ್ರೀಮನ್ಮಧ್ವಾಚಾರ್ಯರೇ, **ಆಚಾರ್ಯಾಃ**-ತತ್ವಬೋಧಕರೂ, **ಮೇ**-ನನ್ನ, **ಜನ್ಮಜನ್ಮನಿ**-ಜನ್ಮಜನ್ಮಾಂತರಗಳಲ್ಲೂ, **ಸಂತು**-ಆಗಲಿ.

**ತಾತ್ಪರ್ಯ**—ನನ್ನದು ಇಷ್ಟೇ ಅಭಿಲಾಷೆ—ನಾನು ಜನ್ಮಜನ್ಮಾಂತರಗಳಲ್ಲೂ ವೈಷ್ಣವನೇ ಆಗಬೇಕು. ಸಾಕ್ಷಾತ್ ವಿದ್ಯೋಪದೇಶಮಾಡಿದ ವಿದ್ಯಾಗುರುಗಳಿಂದ ಹಿಡಿದು ಬ್ರಹ್ಮದೇವರ ಪರ್ಯಂತ ಇರುವ ಹಿರಿಯರೆಲ್ಲರೂ ನನಗೆ ಗುರುಗಳಾಗಿರಬೇಕು. ನನಗೆ ಇಷ್ಟದೇವತೆ ಯಾರೇ ಆಗಿರಲಿ, ಎಲ್ಲರಿಗಿಂತ ಪರಮೇಷ್ಟದೇವತೆ ಲಕ್ಷ್ಮೀಪತಿಯಾದ ವಿಷ್ಣುವೇ ಆಗಿರಬೇಕು. ಮತ್ತು ನನಗೆ ತತ್ತ್ವಮಾರ್ಗಬೋಧಕರು (ಆಚಾರ್ಯರು) ಶ್ರೀಮನ್ಮಧ್ವಾಚಾರ್ಯರೇ ಆಗಬೇಕು. (ಹೀಗೆ ನಿರಂತರವಲ್ಲಿ ಚಿಂತನ ಮಾಡುತ್ತಿದ್ದರೆ ಮರಣಕಾಲದಲ್ಲೂ ಈ ಶ್ಲೋಕ ನೆನಪಿಗೆ ಬರುವುದು, ಅದರಿಂದ ಮುಂದಿನ ಜನ್ಮದಲ್ಲೂ ವೈಷ್ಣವ ಜನ್ಮ ಬರುವುದು.) (ಗೀತೆ, ೮ ಅಧ್ಯಾ. ೬ ಶ್ಲೋ.)

**ಶ್ಲೋಕ ೪**—(ಜ್ಞಾನೇ) ಈ ಶ್ಲೋಕದಲ್ಲಿ ಹನುಮಂತದೇವರ ಹಿರಿಮೆಯನ್ನು ಹೇಳಿದೆ. ಈ ಶ್ಲೋಕವನ್ನು ಆಚಾರ್ಯರು ತಾತ್ಪರ್ಯನಿರ್ಣಯದಲ್ಲಿ (೨ ಅಧ್ಯಾ. ೧೫೫ ಶ್ಲೋ ) ಯಾವುದೋ ಗ್ರಂಥದಿಂದ ಆರಿಸಿ ಪ್ರಮಾಣವಾಗಿ ಹೇಳಿದ್ದಾರೆ. ಈ ಶ್ಲೋಕ ಉಪಜಾತಿ ವೃತ್ತದಲ್ಲಿದೆ.

**ಜ್ಞಾನೇ ವಿರಾಗೇ ಹರಿಭಕ್ತಿಭಾವೇ, ಧೃತಿಸ್ಥಿತಿ-ಪ್ರಾಣಬಲೇಷು ಯೋಗೇ
ಬುದ್ಧೌ ಚ ನಾನ್ಯೋ ಹನುಮತ್ಸಮಾನಃ, ಪುಮಾನ್ ಕದಾಚಿತ್
ಕ್ವ ಚ ಕಶ್ಚ ನೈವ ॥ ೪ ॥**

---

**ಅನ್ವಯಾರ್ಥ**—**ಜ್ಞಾನೇ**-ಶಾಸ್ತ್ರಜ್ಞಾನದಲ್ಲೂ, **ವಿರಾಗೇ**-ವೈರಾಗ್ಯದಲ್ಲೂ, **ಹರಿ....ಭಾವೇ**—**ಹರಿ**-ವಿಷ್ಣುವಿನಲ್ಲಿ, **ಭಕ್ತಿ**-ಭಕ್ತಿಮಾಡುವ, **ಭಾವೇ**-ವಿಷಯದಲ್ಲೂ, **ಧೃತಿ....ಬಲೇಷು**—**ಧೃತಿ**-ಧೈರ್ಯದಲ್ಲೂ, **ಸ್ಥಿತಿ**-ದೃಢತೆಯಲ್ಲೂ ಅಥವಾ ವಿಕಾರರಹಿತನಾಗಿ ಒಂದೇರೀತಿ ಇರುವುದರಲ್ಲೂ, **ಪ್ರಾಣ**-ಅಡ್ಡಾಡುವುದರಲ್ಲೂ, **ಬಲೇಷು**-ಬಲ ಮೊದಲಾದ ಗುಣಗಳಲ್ಲೂ, **ಯೋಗೇ**-ಉಪಾಯದಲ್ಲೂ ಮತ್ತು ಯುದ್ಧ ಸನ್ನಾಹದಲ್ಲೂ, **ಬುದ್ಧೌ ಚ**-ಬುದ್ಧಿಶಕ್ತಿಯಲ್ಲೂ, **ಹನು....ಸಮಾನಃ**—**ಹನುಮತ್**-ಹನುಮಂತನಿಗೆ, **ಸಮಾನಃ**-ಸದೃಶನಾದವನು, **ಅನ್ಯ**-ಬೇರೆ, **ಪುಮಾನ್**-ಪುರುಷನು, **ನ**-ಇಲ್ಲ ಈಗ ಮಾತ್ರವಲ್ಲ, **ಕದಾಚಿತ್**-ಯಾವ ಕಾಲಕ್ಕೂ, **ಕ್ವ ಚ**-ಎಲ್ಲೆಲ್ಲಿಯೂ, **ಕಶ್ಚ**-ಯಾವನೊಬ್ಬನೂ, **ನೈವ**-ಇಲ್ಲವೇ ಇಲ್ಲ.

**ತಾತ್ಪರ್ಯ**—ಜ್ಞಾನದಲ್ಲೂ, ವೈರಾಗ್ಯದಲ್ಲೂ, ದೃಢವಾದ ಹರಿಭಕ್ತಿಯಲ್ಲೂ, ಧೈರ್ಯ-ಶೌರ್ಯ-ಪರಾಕ್ರಮ-ಸಾಹಸ ಮೊದಲಾದ ಯಾವ ವಿಷಯದಲ್ಲೇ ಆಗಲಿ, ಬುದ್ಧಿಚಾತುರ್ಯದಲ್ಲಾಗಲಿ ಹನುಮಂತನಿಗೆ ಸರಿಸಮಾನನಾದ ಬೇರೊಬ್ಬ ವ್ಯಕ್ತಿಯು ಯಾವ ಕಾಲಕ್ಕೂ ಎಲ್ಲೂ ಯಾರೂ ಸಿಗಲು ಸಾಧ್ಯವೇ ಇಲ್ಲ.

**ಶ್ಲೋಕ ೫**—(ವಾತೇನ) ಈ ಶ್ಲೋಕದಲ್ಲಿ ಭೀಮನ ವೈಶಿಷ್ಟ್ಯವನ್ನು ಪ್ರಶಂಸೆ ಮಾಡಲಾಗಿದೆ ಈ ಶ್ಲೋಕ ಶ್ರೀಮನ್ಮಹಾಭಾರತದ ವನಪರ್ವದಲ್ಲಿ ಸೌಗಂಧಿಕಾ ಪುಷ್ಪಹರಣ ಪ್ರಸಂಗದಲ್ಲಿ ಬಂದಿದೆ. ಅದೇ ಸಂದರ್ಭದಲ್ಲೇ ತಾತ್ಪರ್ಯನಿರ್ಣಯದಲ್ಲಿ (೨೨ ಅಧ್ಯಾ. ೩೦೫ ಶ್ಲೋ.) ಶ್ರೀಮದಾಚಾರ್ಯರು ಉದಹರಿಸಿದ್ದಾರೆ. ಇದೂ ಉಪಜಾತಿ ವೃತ್ತದಲ್ಲಿದೆ.

**ಅನ್ವಯಾರ್ಥ**—(**ಸಃ**)-ಆ ಭೀಮನು, **ವಾತೇನ**-ವಾಯುದೇವರಿಂದ, **ಕುಂತ್ಯಾಂ**-ಕುಂತೀದೇವಿಯಲ್ಲಿ, **ಬಲವಾನ್**-ಅಪರಿಮಿತ ಬಲವುಳ್ಳವನಾಗಿ,

**ವಾತೇನ ಕುಂತ್ಯಾಂ ಬಲವಾನ್ ಸ (ಸು, ಪ್ರ)ಜಾತಃ**
**ಶೂರಸ್ತಪಸ್ವೀ ದ್ವಿಷತಾಂ ನಿಹಂತಾ ।**
**ಸತ್ಯೇ ಚ ಧರ್ಮೇ ಚ ರತಃ ಸದೈವ, ಪರಾಕ್ರಮೇ**
**ಶತ್ರುಭಿ-ರಪ್ರಧೃಷ್ಯಃ ॥ ೫ ॥**

---

**ಸುಜಾತಃ** (ಪ್ರಜಾತಃ)–ಹುಟ್ಟಿದನು. **ಶೂರಃ**–ಅಪ್ರತಿಮ ಶೂರನೂ, **ತಪಸ್ವೀ**–ತಪೋನಿರತನೂ ಆಗಿರುವುದಲ್ಲದೆ, **ದ್ವಿಷತಾಂ**–ಸಕಲ ಶತ್ರುಗಳನ್ನೂ **ನಿಹಂತಾ**–ಸಂಹಾರಮಾಡಿದವನು. **ಸದಾ ಏವ**–ಯಾವಾಗಲೂ (ನಿರಂತರ ವಾಗಿ), **ಸತ್ಯೇ ಚ**–ವೇದೋಕ್ತ ಧರ್ಮಾಚರಣೆಯಲ್ಲೂ, **ಧರ್ಮೇ ಚ**–ಅಸ್ಖಲಿತವಾದ ವಿಷ್ಣುದೀಕ್ಷೆಯಲ್ಲೂ ('ಮನ್ಮನಾ ಭವ' ಎಂಬ ಗೀತಾ ಶ್ಲೋಕ ದಲ್ಲಿ ಹೇಳಿದಂತೆ ವಿಷ್ಣುವನ್ನು ಮಾತ್ರವೇ ಸ್ಮರಿಸುವುದೇ ಧರ್ಮ—ಅದೇ ವಿಷ್ಣು ದೀಕ್ಷೆ ), **ರತಃ**–(ಕಿಂಚಿತ್ತೂ ತಪ್ಪದಂತೆ) ನಿರತನಾಗಿದ್ದಾನೆ. **ಪರಾಕ್ರಮೇ**–ಸಾಹಸದಲ್ಲಿ, **ಶತ್ರುಭಿಃ**–ಶತ್ರುಗಳಿಂದ, **ಅಪ್ರಧೃಷ್ಯಃ**–ಕಿಂಚಿತ್ತೂ ಎದೆ ಗುಂದದವನು.

**ತಾತ್ಪರ್ಯ**—ಭೀಮನು ಕುಂತಿಯಲ್ಲಿ ವಾಯುದೇವರ ಅನುಗ್ರಹದಿಂದ ಹುಟ್ಟಿದ ಅಪ್ರತಿಮ ವೀರ. ಎಳೆಮಗುವಾಗಿದ್ದಾಗಲೇ ತಾಯಿಯ ತೊಡೆಯಿಂದ ನೆಲದಮೇಲೆ ಬಿದ್ದಾಗ ಕಲ್ಲು ನೆಲವೇ ಒಡೆಯಿತೇ ಹೊರತು ಮಗುವಿಗೆ ಏನೂ ಆಗಲಿಲ್ಲ. ಹೀಗೆ ಭೀಮ ಅಪ್ರತಿಮನಾದ ಮಹಾಬಲಿಷ್ಠ. ಶೌರ್ಯದಲ್ಲೂ, ತಪಶ್ಶಕ್ತಿಯಲ್ಲೂ, ಸಂಸಾರಮಾಡುವ ಶಕ್ತಿಯಲ್ಲೂ ಅಷ್ಟೇ ಅಲ್ಲ, ವೈದಿಕ ಧರ್ಮವನ್ನು ತಿಳಿದುಕೊಳ್ಳುವುದರಲ್ಲಿ ಮಾತ್ರವಲ್ಲ ಅದನ್ನು ಕಿಂಚಿತ್ತೂ ಕೊರತೆ ಇಲ್ಲದಂತೆ ಅನುಷ್ಠಾನಕ್ಕೆ ತರುವುದರಲ್ಲೂ ಭೀಮ ಆದರ್ಶನಾಗಿದ್ದನು. ಜರಾಸಂಧ, ಬಕ, ಹಿಡಿಂಬ, ಕೀಚಕರಂಥಾ ಜಗಜಟ್ಟಿಗಳಾದ ಶತ್ರುಗಳೊಡನೆ ಯುದ್ಧಮಾಡುವಾಗಲೂ ಕಿಂಚಿತ್ತು ಕೂಡ ಹಿಮ್ಮೆಟ್ಟಲಿಲ್ಲ—ಎಲ್ಲರನ್ನೂ ಪರಾಕ್ರಮದಿಂದ ಎದುರಿಸಿ ಸಂಹರಿಸಿಬಿಟ್ಟನು.

**ಶ್ಲೋಕ ೬**—ಈ ಶ್ಲೋಕವು ಆಚಾರ್ಯರ ಅನೇಕ ಗ್ರಂಥಗಳಲ್ಲಿ ಹೀಗೆಯೇ ದೊರಕುತ್ತದೆ. (ಉದಾ :– ಅನುವ್ಯಾಖ್ಯಾನ, ತಂತ್ರಸಾರ, ಗೀತಾ

**ಯಸ್ಯ ತ್ರೀಣ್ಯುದಿತಾನಿ ವೇದವಚನೇ, ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ, ದೇವಸ್ಯ ಭರ್ಗೋ ಮಹತ್ ।**

---

ತಾತ್ಪರ್ಯ ಇತ್ಯಾದಿ). ಸೂತ್ರಭಾಷ್ಯ, ಉಪನಿಷದ್ಭಾಷ್ಯಗಳಲ್ಲಿ ನಾಲ್ಕನೇ ಚರಣದ ಪಾಠವು ಮಾತ್ರ ಬೇರೆಯಾಗಿದೆ. ಒಟ್ಟಿನಲ್ಲಿ ಶ್ರೀಮದಾಚಾರ್ಯರಿಗೆ ಅತ್ಯಂತ ಪ್ರಿಯವಾದ ಶ್ಲೋಕ ಇದು ಎಂದು ಸಿದ್ಧವಾಗುತ್ತದೆ. ಈ ಶ್ಲೋಕ ಶಾರ್ದೂಲವಿಕ್ರೀಡಿತವೆಂಬ ವೃತ್ತದಲ್ಲಿದ್ದು ಪ್ರತಿಯೊಂದು ಚರಣದಲ್ಲೂ ಹತ್ತೊಂಬತ್ತು ವರ್ಣಗಳಿವೆ. ಹತ್ತೊಂಬರ ಪೈಕಿ ೧೨ನೇ ವರ್ಣವಾದ ಬಳಿಕ ಒಂದು ವಿರಾಮವೂ, ಮುಂದಿನ ಏಳನೇ ವರ್ಣವಾದ ಬಳಿಕ ಇನ್ನೊಂದು ವಿರಾಮವೂ ಇರುತ್ತವೆ—ಇದನ್ನೇ ಛಂದಶ್ಶಾಸ್ತ್ರದಲ್ಲಿ 'ಯತಿ' ಎಂದು ಕರೆಯುತ್ತಾರೆ.

ಈ ಶ್ಲೋಕದ ಮತ್ತೊಂದು ವಿಶೇಷವೇನೆಂದರೆ—ಇದರಲ್ಲಿ ಉಪಯುಕ್ತವಾದ ಅನೇಕ ಪದಗಳು ಬಳಿತ್ಥಾಸೂಕ್ತದಲ್ಲೂ ಸಿಗುತ್ತದೆಯಲ್ಲದೆ ಇದರಲ್ಲಿ ಹೇಳಿದ ವಿಷಯಗಳೂ ಬಳಿತ್ಥಾಸೂಕ್ತದಲ್ಲೇ ಹೇಳಲ್ಪಟ್ಟಿವೆ. ಬಳಿತ್ಥಾಸೂಕ್ತದಲ್ಲಿ ವಾಯುದೇವರ ಅವತಾರತ್ರಯವನ್ನು ವರ್ಣಿಸಿದ ಧಾಟಿಯಲ್ಲೇ ಈ ಶ್ಲೋಕದಲ್ಲೂ ವಾಯುದೇವರ ಅವತಾರತ್ರಯದ ನಿರೂಪಣೆ ಮಾಡಿ ಕೊನೆಗೆ ಆ ವಾಯುದೇವರೇ ತಾನೆಂದು ಕಂಠೋಕ್ತವಾಗಿ ಹೇಳಿಕೊಂಡಿರುವುದು ಎಲ್ಲದಕ್ಕೂ ಹೆಚ್ಚಿನ ವಿಶೇಷ.

ಈ ಶ್ಲೋಕಕ್ಕೆ ಅವತಾರಿಕೆ ಬರೆಯುತ್ತಾ ಟೀಕಾಕೃತ್ಪಾದರಾದ ಶ್ರೀಮಜ್ಜಯತೀರ್ಥರು ಶ್ರೀಮನ್ನ್ಯಾಯಸುಧಾದಲ್ಲಿ ಹೀಗೆ ಅಪ್ಪಣೆಕೊಡಿಸಿದ್ದಾರೆ* 'ಭಗವಂತನ ಸ್ವರೂಪವನ್ನು ತಿಳಿದುಕೊಳ್ಳುವುದು ಹೇಗೆ ಸಕಲ ಪುರುಷಾರ್ಥಗಳನ್ನೂ ಪಡೆಯುವುದಕ್ಕೆ ಸಾಧನವಾಗಿದೆಯೋ ಅದೇ ರೀತಿ ತಮ್ಮ (ಎಂದರೆ ವಾಯುದೇವರ) ಸ್ವರೂಪಜ್ಞಾನವೂ ಸಕಲ ಪುರುಷಾರ್ಥಗಳನ್ನು ಪಡೆಯುವ

---

*ಯಥಾ ಭಗವತ್ ಸ್ವರೂಪ ವಿಜ್ಞಾನಂ ಸಮಸ್ತ ಪುರುಷಾರ್ಥಸಾಧನಂ, ತಥಾ ಸ್ವಸ್ವರೂಪ ವಿಜ್ಞಾನಮಪೀತ್ಯತಃ ತದಾ ವಿಷ್ಕುರ್ವನ್ನಾಹ-ಯಸ್ಯೇತಿ.

**ವಾಯೋಃ ರಾಮವಚೋನಯಂ ಪ್ರಥಮಕಂ,**
**ಪೃಕ್ಷೋ ದ್ವಿತೀಯಂ ವಪುರ್**
**ಮಧ್ವೋ ಯತ್ತು ತೃತೀಯಮೇತದಮುನಾ,**
**ಗ್ರಂಥಃ ಕೃತಃ ಕೇಶವೇ ॥ ೬ ॥**

---

ದಕ್ಕೆ ಸಾಧನವಾಗಿದೆಯಾದ್ದರಿಂದ ಆ ತಮ್ಮ ಸ್ವರೂಪವನ್ನು ತಿಳಿಸಿಕೊಡುತ್ತಾ 'ಯಸ್ಯತ್ರೀಣಿ' ಎಂಬ ಶ್ಲೋಕ ರಚಿಸಿದ್ದಾರೆ.

ಪ್ರಧಾನವಾಕ್ಯ—ಈ ಶ್ಲೋಕದಲ್ಲಿ ಮುಂದೆ ತೋರಿಸಿದಂತೆ ಏಳು ಚಿಕ್ಕ ವಾಕ್ಯಗಳಿವೆ—(೧) ವೇದವಚನೇ ಯಸ್ಯ ವಾಯೋಃ ತ್ರೀಣಿ ರೂಪಾಣಿ ಉದಿ-ತಾನಿ-ಯಾವ ವಾಯುದೇವರಿಗೆ ವೇದದಲ್ಲಿ ಮೂರು ರೂಪಗಳಿವೆಯೆಂದು ಹೇಳಿದೆಯೋ, (೨) ವಾಯೋಃ ದೇವಸ್ಯ ತತ್ ಬಲ್, ದರ್ಶತಂ, ಭರ್ಗಃ ಮಹತ್ ಚ–ಆ ವಾಯುದೇವರ ಮೂಲರೂಪವು ಬಲಸ್ವರೂಪವೂ, ಜ್ಞಾನ ಸ್ವರೂಪವೂ, ಭರ್ಗಃ-ಮಹತ್ ಕೂಡ ಆಗಿದೆ. (೩) ನಿಹಿತಂ ಇತ್ಥಮೇವ–ಅವತಾರರೂಪವೂ ಹೀಗೆಯೇ ಇದೆ. (೪) ಯಸ್ಯ ಪ್ರಥಮಕಂ ವಪುಃ ರಾಮ ವಚೋನಯಂ–ಯಾವ ವಾಯುದೇವರ ಪ್ರಥಮರೂಪವು ರಾಮದೇವರ ಮಾತನ್ನು ಒಯ್ದಿತೋ, (೫) ದ್ವಿತೀಯಂ ವಪುಃ ಪೃಕ್ಷಃ–ಎರಡನೆಯ ರೂಪವು ಶತ್ರುಸೈನ್ಯವನ್ನು ನಾಶಮಾಡಿತೋ, (೬) ಯತ್ತು ತೃತೀಯಂ ವಪುಃ ಮಧ್ವಃ–ಮೂರನೆಯ ರೂಪವೇ ಮಧ್ವನಾಮಕವಾಗಿದೆಯೋ, (೭) ಅಮುನಾ ಗ್ರಂಥಃ ಕೃತಃ–ಆ ಮಧ್ವಮುನಿಯಿಂದಲೇ ಈ ಗ್ರಂಥವು ರಚಿಸಲ್ಪಟ್ಟಿತು.

ಈ ಶ್ಲೋಕದಲ್ಲಿರುವ ಅನೇಕ ಪದಗಳಿಗೆ ಅರ್ಥ ವಿವರಣೆ ಮಾಡದಿದ್ದರೆ ಅರ್ಥವೇ ಆಗುವುದಿಲ್ಲ. ಆದ್ದರಿಂದ ಮೊದಲು ಕಠಿನಪದಗಳ ಅರ್ಥವನ್ನು ಬಿಡಿಸಿ ಹೇಳಿ ಆಮೇಲೆ ಅನ್ವಯಾರ್ಥಕ್ಕೆ ಹೋಗುವೆನು.

## ಯಸ್ಯ ತ್ರೀಣ್ಯುದಿತಾನಿ ಎಂಬ ಶ್ಲೋಕದ ವಿವರಣೆ

### ಕಠಿನ ಶಬ್ದಗಳ ವಿವರಣೆ

೧. **ವೇದವಚನೇ—ವೇದ**–ಋಗ್ವೇದದ, **ವಚನೇ**–ಬಳಿತ್ಥಾಸೂಕ್ತದ ವಾಕ್ಯಗಳಲ್ಲಿ ೧ನೇ ಮಂಡಲದ ೧೪೧ನೇ ಸೂಕ್ತದಲ್ಲಿ. ೨. **ಅಲಂ** (ಅವ್ಯಯ) ಚೆನ್ನಾಗಿ, ಬಹಳವಾಗಿ. ಇದನ್ನು ದಿವ್ಯಾನಿ ಜೊತೆಯಲ್ಲೂ ಬಟ್ ಜೊತೆಯಲ್ಲೂ ಅನ್ವಯಿಸಬಹುದು. ೩. **ಬಟ್** (ಅವ್ಯಯ) ಬಲಾತ್ಮಕವಾದುದು. ೪. **ತತ್**–ಅದು ಎಂದರೆ ಮೂಲರೂಪವು. ೫. **ದರ್ಶತಂ** ಶಬ್ದಕ್ಕೆ ಟೀಕಾರಾಯರೇ ಎರಡು ಬೇರೆ ಬೇರೆ ವ್ಯುತ್ಪತ್ತಿ ತೋರಿಸಿದ್ದಾರೆ. ಋಗ್ಭಾಷ್ಯ ದಲ್ಲಿ **ದರ್ಶಃ** ಎಂದರೆ ಜ್ಞಾನವೆಂದೂ, ಅದರಿಂದ ತ ಎಂದರೆ ತತ–ವ್ಯಾಪ್ತರಾದ ಎಂದರೆ ಜ್ಞಾನಸ್ವರೂಪರಾದವರು ಎಂದರ್ಥ ಹೇಳಿದ್ದಾರೆ. ನ್ಯಾಯಸುಧಾದಲ್ಲಿ ದೃಶ್–ನೋಡು ಎಂಬ ಧಾತುವಿನ ಮೇಲೆ ಅತಚ್ ಎಂಬ ಉಣಾದಿಪ್ರತ್ಯಯ ಬಂದು ದರ್ಶತ ಎಂದಾಗಿದೆಯೆಂದು ಹೇಳಿದ್ದಾರೆ. ಇದಕ್ಕೂ ಜ್ಞಾನರೂಪರಾದ ಎಂದೇ ಅರ್ಥವಾಗುತ್ತದೆ. ವಾಯುಶಬ್ದದಲ್ಲಿರುವ **ವಕಾರವು** ಬಲವನ್ನೂ, ಅಯ ಅಥವಾ ಆಯು ಪದವು ಜ್ಞಾನವನ್ನೂ ಹೇಳುತ್ತದೆ, ಆದ್ದರಿಂದ ಬಟ್–ದರ್ಶತಂ ಎಂಬ ಎರಡು ಪದಗಳು ವಾಯುಶಬ್ದಾರ್ಥವೇ ಆಗಿವೆ. ೬. **ಇತ್ಥಮೇವ**–'ಇತ್ಥಂ' (ಅವ್ಯಯ) ಹೀಗೆ, ಇತ್ಥಮೇವ–ಹೀಗೆಯೇ ಅಥವಾ ಇದೇ ರೀತಿಯೇ ಎಂದರೆ ಮೂಲರೂಪದಂತೆಯೇ ಬಲಾತ್ಮಕವೂ ಜ್ಞಾನಾತ್ಮ-ಕವೂ ಆಗಿವೆ ಎಂದರ್ಥ. ೭. **ನಿಹಿತಂ** ಎಂದರೆ (ಭಗವಂತನ ಪ್ರೇರಣೆಯಿಂದ) ಅವತಾರಮಾಡಿದ ಎಂದರ್ಥ, ಅರ್ಥಾತ್ ಅವತಾರರೂಪವೂ ಎಂದರ್ಥ. ೮. **ಭರ್ಗಃ** ಎಂಬುದು ಮನಃ, ಶಿರಃ ಎಂಬ ಶಬ್ದಗಳಂತೆ ಸಕಾರಾಂತ ನಪುಂಸಕ ಲಿಂಗ ಶಬ್ದ. ಇದರಲ್ಲಿ ಭರ, ಗ ಎಂಬ ಎರಡು ಧಾತುಗಳ ಮೇಲೆ ಅಸ್ (ಅಸುನ್) ಪ್ರತ್ಯಯ ಬಂದು ಭರ್ಗಸ್–ಭರ್ಗಃ ಎಂದಾಗಿದೆ. ಈ ಶಬ್ದಕ್ಕೆ (೧) ಸುಧಾದಲ್ಲಿ 'ಭರಣ-ಗಮನಯೋಃ ಕರ್ತೃ' ಎಂದು ಅರ್ಥ ಹೇಳಿದ್ದಾರೆ. ಆ ಪ್ರಕಾರ ಭರ್ಗಃ ಎಂದರೆ ಸಕಲ ಜಗತ್ತನ್ನೂ ಧರಿಸಿ (ಭರ) ಅವರವರ ಸಾಧನಾನುಸಾರ ಗತಿಯನ್ನು (ಗ) ಕೊಡುವವರು ಎಂದರ್ಥವಾಗುತ್ತದೆ.

(೨) ವಾದಿರಾಜರು—ಭರ್–ಜಗತ್ತನ್ನು ಶ್ವಾಸರೂಪದಿಂದ ಧರಿಸುವುದಕ್ಕಾಗಿ, ಗ–ಹೃದಯದಲ್ಲಿ ನೆಲೆಸಿರುವವನು ಎಂದು ಅರ್ಥ ಹೇಳಿದ್ದಾರೆ. (೩) ಭರ ಶಬ್ದವು ಜ್ಞಾನವುಳ್ಳವರೆಂದೂ, ಗ ಶಬ್ದವು ಅದರಂತೆ ನಡೆಯುವವರು ಎಂಬ ಅರ್ಥವೂ ಆಗುತ್ತದೆ. ಈ ಅರ್ಥವನ್ನೇ 'ಋತಂ ವದಿಷ್ಯಾಮಿ, ಸತ್ಯಂ ವದಿ-ಷ್ಯಾಮಿ' ಎಂಬ ತೈತ್ತಿರೀಯ ಶ್ರುತಿ ಹೇಳುತ್ತದೆ. (ಹೀಗೆಯೇ ವಾದಿರಾಜರು ಯುಕ್ತಿಮಲ್ಲಿಕಾದಲ್ಲಿ ಅನೇಕಾರ್ಥಗಳನ್ನು ತೋರಿಸಿದ್ದಾರೆ.) ೯. **ಮಹತ್** ಎಂದರೆ ಶ್ರೇಷ್ಠವಾದ ಎಂದರ್ಥ. ವಯ ಎಂಬ ಧಾತುವಿಗೆ ಶ್ರೇಷ್ಠ* ಎಂಬ ಅರ್ಥವೂ ಇರುವುದರಿಂದ ವಾಯು ಎಂದರೆ ಶ್ರೇಷ್ಠ ಎಂದೂ ಅರ್ಥವಾಗುತ್ತದೆ ಎಂದು ಋಗ್ಭಾಷ್ಯದಲ್ಲಿ ತೋರಿಸಿದ್ದಾರೆ. ಆ ಅರ್ಥವನ್ನೇ 'ಮಹತ್' ಶಬ್ದ ತೋರಿಸುತ್ತದೆ. ೧೦. **ಪೃಕ್ಷಃ** ಎಂಬಲ್ಲಿ ಪೃ + ಕ್ಷ ಎಂದು ಎರಡು ಅವಯವ ಗಳಿವೆ. ಅದರಲ್ಲಿ ಪೃ ಎಂಬುದು 'ಪೃತನಾ'–ಸೈನ್ಯ ಎಂಬ ಶಬ್ದದ ಹ್ರಸ್ವ ರೂಪ. **ಕ್ಷಯ** ಶಬ್ದದ ಹ್ರಸ್ವರೂಪವೇ **ಕ್ಷ** ಹೀಗೆ ಪೃ-ಕ್ಷ ಎಂದರೆ 'ಪೃತನಾ-ಕ್ಷಯಕರ'–ಸೈನ್ಯವನ್ನು ನಾಶಮಾಡುವವನು ಎಂದರ್ಥವಾಗುತ್ತದೆ. ಭೀಮನು ಅನೇಕ ದುಷ್ಟರನ್ನು ಸಂಹಾರಮಾಡಿದನಲ್ಲದೆ ಭಾರತಯುದ್ಧದಲ್ಲಿ ಅನೇಕ ಸೈನ್ಯ ಗಳನ್ನು ನಾಶಮಾಡಿದನಾದ್ದರಿಂದ ಪೃಕ್ಷ ಎಂಬುದು ಭೀಮನಿಗೆ ಸಂಕೇತನಾಮ. (ಇದನ್ನೇ ಬಳಿತ್ಥಾಸೂಕ್ತದಲ್ಲಿರುವ 'ಪೃಕ್ಷೋ ವಪುಃ....ದ್ವಿತೀಯಂ' ಎಂಬ ಪದಗಳು ಹೇಳುತ್ತವೆ.) ಈಗ ಅನ್ವಯಾರ್ಥಕ್ಕೆ ಹೋಗೋಣ.

ಅನ್ವಯಾರ್ಥ ಹೇಳುವಾಗ '**ಯಸ್ಯ**' ಎಂಬ ಪದವನ್ನು ಅನೇಕಾವರ್ತಿ ಆವೃತ್ತಿಮಾಡಿಕೊಂಡು ಅರ್ಥ ಹೇಳಬೇಕು. ಉತ್ತರಾರ್ಧದ ಪ್ರಾರಂಭದಲ್ಲಿ ಇರುವ '**ವಾಯೋಃ**' ಎಂಬುದನ್ನು 'ಯಸ್ಯ' ಜೊತೆಗೆ ಸೇರಿಸಿ 'ಯಸ್ಯ ವಾಯೋಃ' ಎಂದು ಅನ್ವಯಿಸಿಕೊಳ್ಳಬೇಕು.

**ಅನ್ವಯಾರ್ಥ**—(ಪೂರ್ವಾರ್ಧ–ಪ್ರಥಮ ಚರಣ) ೧. **ಯಸ್ಯ ವಾಯೋಃ ದೇವಸ್ಯ**–ಯಾವ ವಾಯುದೇವರಿಗೆ, **ವೇದವಚಸೇ**–ಋಗ್ವೇದದ ಬಳಿತ್ಥಾಸೂಕ್ತದಲ್ಲಿ, **ಅಲಂ**–ಚೆನ್ನಾಗಿ (ಬಹಳ), **ದಿವ್ಯಾನಿ**–ಶ್ರೇಷ್ಠವಾದ, **ತ್ರೀಣಿ ರೂಪಾಣಿ**–ಮೂರು ರೂಪಗಳು ಇವೆಯೆಂದು, **ಉದಿತಾನಿ**–ಹೇಳ

---

* ವಯ ಶ್ರೇಷ್ಠತ್ವ ಇತ್ಯಪಿ (ಋಗ್ಭಾಷ್ಯ)

ಲ್ಪಟ್ಟಿವೆಯೋ, (ದ್ವಿತೀಯ ಚರಣ) ೨. **ವಾಯೋಃ ದೇವಸ್ಯ**–ಆ ವಾಯು ದೇವರ, **ತತ್**–ಮೂಲರೂಪವು, **ಅಲಂ**–ಚೆನ್ನಾಗಿ, **ಬಲ್**–ಬಲಾತ್ಮಕವೂ, **ದರ್ಶತಂ**–ಜ್ಞಾನಾತ್ಮಕವೂ ಆಗಿದೆ. (ಆದ್ದರಿಂದಲೇ 'ವಾಯು' ವಾಚ್ಯ ವಾಗಿದೆ.) ಅದೇ ರೀತಿ, **ಭರ್ಗಃ**–ಭರಣ-ಗಮನರೂಪವಾಗಿರುವುದರಿಂದಲೂ ಅಥವಾ ಶ್ವಾಸಧಾರಣಕ್ಕಾಗಿ ಪ್ರಾಣಿಗಳ ಹೃದಯಗಳಲ್ಲಿ ಇರತಕ್ಕದ್ದೂ ಆಗಿದೆ. **ಮಹತ್**–ಶ್ರೇಷ್ಠವೂ ಆಗಿದೆ. ೩. **ನಿಹಿತಂ**–(ಭಗವಂತನ ಅಪ್ಪಣೆಯಿಂದ) ಅವತಾರಮಾಡಿದ ಅವತಾರರೂಪವೂ, **ಇತ್ಥಂ ಏವ**–ಹೀಗೆಯೇ ಇದೆ, ಎಂದರೆ ಮೂಲರೂಪದಂತೆಯೇ ಬಲಾತ್ಮಕವೂ ಜ್ಞಾನಾತ್ಮಕವೂ ಆಗಿದೆ. (ಉತ್ತ-ರಾರ್ಧ ತೃತೀಯ ಚರಣ) ೪. **ಯಸ್ಯ ವಾಯೋಃ**–ಯಾವ ವಾಯುವಿನ, **ಪ್ರಥಮಕಂ**–ಮೊದಲನೆಯ ರೂಪವು (ಹನುಮರೂಪವು), ರಾಮ.....ನಯಂ–**ರಾಮ**–ಶ್ರೀರಾಮನ, **ವಚಃ**–ಮಾತನ್ನು ಎಂದರೆ ಸಂದೇಶವನ್ನು, **ನಯಂ**–ಸೀತೆಗೆ ಒಯ್ಯಿತೋ ಅಥವಾ **ರಾಮ**–ಶ್ರೀರಾಮನಿಗೆ, **ವಚಃ**–ಸೀತೆಯ ಸಂದೇಶವನ್ನು, **ನಯಂ**–ಒಯ್ದು ತಿಳಿಸಿತೋ, ೫. **ಯಸ್ಯ ವಾಯೋಃ**–ಯಾವ ವಾಯುವಿನ, **ದ್ವಿತೀಯಂ**–ಎರಡನೆಯ, **ವಪುಃ**–ಅ ವ ತಾ ರ ವು (ಭೀಮನು), **ಪೃಕ್ಷಃ**–ಪೃತನಾ-ಕ್ಷಯಕಾರಿಯಾಗಿ ಶತ್ರುಗಳ ಸೈನ್ಯಗಳ ಸೈನ್ಯ ವನ್ನು ನಾಶಮಾಡಿತೋ (ನಾಲ್ಕನೆಯ ಚರಣ) ೬. **ಯಸ್ಯ**–ವಾಯುವಿನ, **ತೃತೀಯಂ**–ಮೂರನೆಯದಾದ, **ಮಧ್ವ**–ಮಧ್ವಾಚಾರ್ಯರೆಂಬ, **ಯತ್ ತು ಏತತ್**–ಯಾವ ಈ ಅವತಾರವುಂಟೋ, ೭. **ಅಮುನಾ**–ಅವನಿಂದಲೇ, **ಕೇಶವೇ**–(ಕ-ಬ್ರಹ್ಮದೇವರು, ಈಶ-ರುದ್ರದೇವರು ಇವರಿಗೆ, ವೇ-ನಿಯಾಮಕ ನಾದ) ಶ್ರೀವಿಷ್ಣುವಿನ ವಿಷಯದಲ್ಲಿ (ಎಂದರೆ ವಿಷ್ಣುವಿನ ಆಜ್ಞಾಪ್ರಕಾರ, ವಿಷ್ಣುಪ್ರೀತ್ಯರ್ಥವಾಗಿಯೇ), **ಗ್ರಂಥಃ**–ಈ ಗ್ರಂಥವು, **ಕೃತಃ**–ಮಾಡಲ್ಪಟ್ಟಿತು.

**ತಾತ್ಪರ್ಯ**—ಋಗ್ವೇದದ ಬಳಿತ್ಥಾಸೂಕ್ತದಲ್ಲಿ ಯಾವ ವಾಯು ದೇವರಿಗೆ ಹನುಮ, ಭೀಮ, ಮಧ್ವ ಎಂಬ ಮೂರು ಅವತಾರರೂಪಗಳಿವೆ ಎಂದು ಹೇಳಿದೆಯೋ, ಆ ವಾಯುದೇವರ ಮೂಲರೂಪವು ಬಲಾತ್ಮಕವೂ ಜ್ಞಾನಾತ್ಮಕವೂ ಆಗಿರುವುದರಿಂದಲೇ 'ವಾಯು' ಪದ ವಾಚ್ಯವಾಗಿದೆ. ಅದೇ ರೀತಿ ಜಗತ್ತಿನ ಭರಣ-ಗಮನಗಳಿಗೆ ಕಾರಣವಾದ್ದರಿಂದಲೂ ಶ್ವಾಸಭರಣಾರ್ಥ ಹೃದಯದಲ್ಲಿ ನೆಲೆಸಿರುವುದರಿಂದಲೂ ಭರ್ಗಃ ಎನಿಸಿದೆ. ಅದೇ ರೀತಿ 'ವಯಃ

## ಯಸ್ಯ ತ್ರೀಣಿ ಎಂಬ ಶ್ಲೋಕಾರ್ಥ

**ಮಹಾವ್ಯಾಕರಣಾಂಭೋಧಿ-ಮಂಥ-ಮಾನಸ-ಮಂದರಮ್ ।**
**ಕವಯಂತಂ ರಾಮಕೀರ್ತ್ಯಾ ಹನು(ನೂ)ಮಂತಮುಪಾಸ್ಮಹೇ ॥ ೭ ॥**

---

ಶ್ರೇಷ್ಠತ್ವೇ' ಎಂಬ ಉಕ್ತಿಯಂತೆ ಜೀವೋತ್ತಮರೂ ದೇವೋತ್ತಮರೂ ಆಗಿರುವುದರಿಂದಲೂ 'ವಾಯು' ಎನ್ನಿಸಿದೆ. ಮೂಲರೂಪಗಳಲ್ಲಿ ಬಲ-ಜ್ಞಾನ-ಭರಣ-ಗಮನ-ಶ್ರೇಷ್ಠತ್ವಗಳು ಇರುವಂತೆಯೇ ಎಲ್ಲಾ ಅವತಾರಗಳಲ್ಲೂ ಹೀಗೆಯೇ ಈ ಗುಣಗಳೂ ಇವೆ, ಆದರೆ ಅವುಗಳನ್ನು ಯಥೋಚಿತವಾಗಿ ಸ್ವಲ್ಪ ಮಾತ್ರವೇ ಪ್ರಕಟಮಾಡುತ್ತವೆ. ಆ ವಾಯುದೇವರ ಪ್ರಥಮರೂಪವಾದ ಹನುಮದ್ರೂಪವು ರಾಮನ ಸಂದೇಶವನ್ನು ಸೀತೆಗೂ ಸೀತೆಯ ಸಂದೇಶವನ್ನು ರಾಮನಿಗೂ ಮುಟ್ಟಿಸಿತು. ಎರಡನೆಯ ಭೀಮರೂಪವು ಭೂಮಿಗೆ ಭಾರ ಭೂತರಾಗಿದ್ದ ದೈತ್ಯರ ಸೈನ್ಯಗಳನ್ನು ನಾಶಮಾಡಿಬಿಟ್ಟಿತು. ಆ ವಾಯುದೇವರ ಮೂರನೇ ರೂಪವೇ ಮಧ್ವ ಎಂಬುದು. ಅವರಿಂದಲೇ ಈ ಗ್ರಂಥವು ಶ್ರೀಹರಿಯ ಆಜ್ಞಾನುಸಾರ ಶ್ರೀಹರಿಪ್ರೀತ್ಯರ್ಥವಾಗಿಯೇ ರಚಿಸಲ್ಪಟ್ಟಿತು.

**ಶ್ಲೋಕ ೭**—(ಮಹಾ) ಮುಂದಿನ ನಾಲ್ಕು ಶ್ಲೋಕಗಳಲ್ಲಿ ಕ್ರಮವಾಗಿ ಆ ಮೂರು ಅವತಾರಗಳ ಸ್ತುತಿಯನ್ನೇ ಹೇಳುತ್ತಾರೆ. ಈ ಶ್ಲೋಕದಲ್ಲಿ ಹನುಮಂತನ ಧ್ಯಾನ ಹೇಳಿದೆ. ಈ ಶ್ಲೋಕವನ್ನು 'ಸುಮಧ್ವ ವಿಜಯ'ವನ್ನು ರಚಿಸಿದ ನಾರಾಯಣ ಪಂಡಿತಾಚಾರ್ಯರ ಕೃತಿ 'ಸಂಗ್ರಹ ರಾಮಾಯಣ'ದ ಮಂಗಳ ಶ್ಲೋಕಗಳಿಂದ ಆರಿಸಿದೆ.

**ಕಠಿನ ಶಬ್ದಾರ್ಥ—ಮಹಾವ್ಯಾಕರಣ**–ನಾರಾಯಣದೇವರಿಂದ ರಚಿತ ವಾದ ದೊಡ್ಡ ವ್ಯಾಕರಣಗ್ರಂಥ. ಇದು ಲೋಕದಲ್ಲಿ ಪ್ರಚಲಿತವಾಗಿಲ್ಲ, ಬಹಳ ವಿಸ್ತಾರವೂ ಕಠಿನವೂ ಆಗಿರಬೇಕು. ಆ ವ್ಯಾಕರಣದ ಕೆಲವು ಸೂತ್ರಗಳನ್ನು ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ಉದಹರಿಸಿದ್ದಾರೆ. **ಅಂಭೋಧಿ** (ಅಂಭಃ-ನೀರು, ಧಿ-ನಿಲ್ಲುವ ಸ್ಥಳ)–ಸಮುದ್ರ, ಸಾಗರ, **ಮಂಥ**–ಕಡೆಯು ವುದು ಅಥವಾ ಕಡೆಯುವ ಕಡಗೋಲು, **ಮಾನಸ**–ಮನಸ್ಸು, **ಕವಯಂತಂ**–ಕೀರ್ತನೆ ಮಾಡುತ್ತಿರುವ, ವರ್ಣಿಸುತ್ತಿರುವ, **ಉಪಾಸ್ಮಹೇ**–ಉಪಾಸನೆ ಮಾಡುತ್ತೇವೆ, ಆರಾಧಿಸುತ್ತೇವೆ.

**ಮುಖ್ಯಪ್ರಾಣಾಯ ಭೀಮಾಯ ನಮೋ ಯಸ್ಯ ಭುಜಾಂತರಮ್ ।**
**ನಾನಾವೀರಸುವರ್ಣಾನಾಂ ನಿಕಷಾಶ್ಮಾಯಿತಂ ಬಭೌ ॥ ೮ ॥**

---

**ಅನ್ವಯಾರ್ಥ**—ಮಹಾ....ಮಂದರಂ— **ಮಹಾ ವ್ಯಾಕರಣ**-ಮಹಾ ವ್ಯಾಕರಣವೆಂಬ, **ಅಂಬೋಧಿ**-ಸಮುದ್ರವನ್ನು, **ಮಂಥ**-ಮಂಥನಮಾಡುವ ಕಡಗೋಲಿನಂತಿರುವ, **ಮಾನಸ**-ಬುದ್ಧಿಯೆಂಬ, **ಮಂದರಂ**-ಮಂದರಪರ್ವತ ದಂತಿರುವ, **ರಾಮಕೀರ್ತ್ಯಾ**-ಶ್ರೀರಾಮನ ಕೀರ್ತಿಯಿಂದ, **ಕವಯಂತಂ**-ಕವನಮಾಡುತ್ತಿರುವ (ಕೀರ್ತನಮಾಡುತ್ತಿರುವ), **ಹನು(ನೂ)ಮಂತಂ**-ಹನುಮಂತನನ್ನು, **ಉಪಾಸ್ಮಹೇ**-ನಾವು ಉಪಾಸನೆ ಮಾಡುತ್ತೇವೆ (ಧ್ಯಾನ ಮಾಡಿ ಆರಾಧಿಸುತ್ತೇವೆ.)

**ತಾತ್ಪರ್ಯ**—ಕ್ಷೀರಸಮುದ್ರವನ್ನು ಮಂದರಪರ್ವತದಿಂದ ಕಡೆದು ಅಮೃತವನ್ನು ಪಡೆದಂತೆ ಹನುಮಂತದೇವರು ಅಗಾಧವಾದ ಮಹಾವ್ಯಾಕರಣ ವನ್ನು ತಮ್ಮ ಮನಸ್ಸೆಂಬ ಮಂದರದಿಂದ ಕಡೆದು ಎಂದರೆ ಮನಃಪೂರ್ವಕ ಅಧ್ಯಯನ ಮಾಡಿ ಅದರಿಂದ ಉತ್ಪತ್ತಿಯಾದ ರಾಮಕೀರ್ತಿ ಎಂಬ ಅಮೃತ ವನ್ನು ಎಲ್ಲರಿಗೂ ಅನುವಾದ ಮಾಡುತ್ತಿದ್ದಾರೆ. ಅಂಥಾ ಹನುಮಂತದೇವರನ್ನು ನಾವು ಧ್ಯಾನಮಾಡಿ ಆರಾಧಿಸುತ್ತೇವೆ.

**ಶ್ಲೋಕ ೮**—(ಮುಖ್ಯಪ್ರಾಣಾಯ) ಈ ಶ್ಲೋಕದಲ್ಲಿ ಭೀಮನ ಪ್ರಶಂಸೆಯಿದೆ. ಈ ಶ್ಲೋಕದ ಆಕರಗ್ರಂಥ ತಿಳಿದಿಲ್ಲ.

**ಕಠಿನ ಶಬ್ದಾರ್ಥ**—**ಭುಜಾಂತರಂ**-ಎಂದರೆ ಎರಡು ಭುಜಗಳ ಮಧ್ಯ ದಲ್ಲಿರುವ ಪ್ರದೇಶ ಅರ್ಥಾತ್ ವಕ್ಷಃಸ್ಥಳ ಅಥವಾ ಎದೆಯ ಪ್ರದೇಶ, **ಸುವರ್ಣ**-ಬಂಗಾರ, **ನಿಕಶ+ಅಶ್ಮ**-ಒರೆಹಚ್ಚುವ ಕಲ್ಲು ಅಥವಾ ಒರೆಗಲ್ಲು, **ಬಭೌ**-ಪ್ರಕಾಶಿಸಿತು.

**ಅನ್ವಯಾರ್ಥ**—**ಯಸ್ಯ**-ಯಾರ, **ಭುಜಾಂತರಂ**-ಭುಜಗಳ ಮಧ್ಯ ದಲ್ಲಿರುವ ವಕ್ಷಃಸ್ಥಳವು, ನಾನಾ....ಸುವರ್ಣಾನಾಂ—**ನಾನಾ**-ಅನೇಕಬಗೆಯ, **ವೀರ**-ಶೂರರೆಂಬ, **ಸುವರ್ಣಾನಾಂ**-ಬಂಗಾರಗಳಿಗೆ, **ನಿಕಷಾಶ್ಮಾಯಿತಂ**-

**ಸ್ವಾಂತಸ್ಥಾನಂತಶಯ್ಯಾಯ ಪೂರ್ಣಜ್ಞಾನರಸಾರ್ಣಸೇ ।**
**ಉತ್ತುಂಗ ವಾಕ್ತರಂಗಾಯ ಮಧ್ವದುಗ್ಧಾಬ್ಧಯೇ ನಮಃ ॥ ೯ ॥**

---

ಒರೆಹಚ್ಚಿ ನೋಡುವ ವರೆಗಲ್ಲಿನಂತೆ ಇದ್ದು, ಬಭೌ ಪ್ರಕಾಶಿಸಿತೋ, ಅಂಥಾ, **ಭೀಮಾಯ**-ಭೀಮರೂಪಿಯಾದ, **ಮುಖ್ಯಪ್ರಾಣಾಯ**-ಮುಖ್ಯಪ್ರಾಣ ದೇವರಿಗೆ, **ನಮಃ**-ನಮಸ್ಕಾರ.

**ತಾತ್ಪರ್ಯ**—ಬಂಗಾರವನ್ನು ಒರೆಗಲ್ಲಿನ ಮೇಲೆ ತಿಕ್ಕಿದರೆ ಅದು ಅಪ್ಪಟವೇ ಅಲ್ಲವೇ ಎನ್ನುವುದೂ ಎಷ್ಟರಮಟ್ಟಿಗೆ ಶುದ್ಧ ಎನ್ನುವುದೂ ಸಹ ತಿಳಿದುಹೋಗುತ್ತದೆ. ಅದರಂತೆ ಬಕ, ಕೀಚಕ, ಹಿಡಿಂಬ, ಜರಾಸಂಧಾದಿ ಮಹಾ ಪರಾಕ್ರಮಶಾಲಿಗಳೂ ಭೀಮನೊಡನೆ ಯುದ್ಧಮಾಡಿ ಹೊಡೆದಾಡಿ ಹಾಗ ಅವರ ಅವರ ಪರಾಕ್ರಮ, ಶೌರ್ಯ-ಸಾಹಸಗಳು ಎಷ್ಟರಮಟ್ಟಿಗಿದ್ದುವು ಎಂಬುದನ್ನು ಭೀಮನ ವಕ್ಷಃಸ್ಥಳವೇ ತೋರಿಸಿಕೊಡುತ್ತಿತ್ತು. ಅಂಥಾ ಅಪ್ರತಿಮ ಪರಾಕ್ರಮಶಾಲಿಯಾದ ಭೀಮರೂಪಿ ಮುಖ್ಯಪ್ರಾಣದೇವರಿಗೆ ಅನೇಕ ನಮಸ್ಕಾರಗಳು.

**ಶ್ಲೋಕ ೯**—(ಸ್ವಾಂತಸ್ಥಾ) ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರನ್ನು ಕ್ಷೀರಸಮುದ್ರಕ್ಕೆ ಹೋಲಿಸಿ ವಂದನೆ ಮಾಡಲಾಗಿದೆ. ಇದರ ಆಕರವೂ ತಿಳಿದಿಲ್ಲ.

**ಕಠಿನ ಶಬ್ದಾರ್ಥ**—ಅನಂತ-ಆದಿಶೇಷನೇ, **ಶಯ್ಯಾ**-ಹಾಸಿಗೆಯಾಗಿ ಇರುವವನು ಶೇಷಶಾಯಿಯಾದ ನಾರಾಯಣ, **ರಸ**-ಜಲ, **ಅರ್ಣಸೇ**-(ಸಕಾರಾಂತ ಶಬ್ದ, ಚತುರ್ಥೀ ವಿಭಕ್ತಿರೂಪ) ಸಮುದ್ರಕ್ಕೆ, **ಉತ್ತುಂಗ**-ಎತ್ತರವಾದ, **ದುಗ್ಧ**-ಕ್ಷೀರದ, **ಅಬ್ಧಿ**-ಸಮುದ್ರ.

**ಅನ್ವಯಾರ್ಥ**—ಸ್ವಾಂತ....ಶಯ್ಯಾಯ—**ಸ್ವ**-ತಮ್ಮ, **ಅಂತಃ**-ಒಳಗೇ, **ಸ್ಥ**-ಇರುವ, **ಅನಂತಶಯ್ಯಾಯ**-ನಾರಾಯಣನುಳ್ಳ, **ಪೂರ್ಣ-ರ್ಣಸೇ**—**ಪೂರ್ಣ**-ಪರಿಪೂರ್ಣವಾದ, **ಜ್ಞಾನ**-ಜ್ಞಾನವೆಂಬ, **ರಸ**-ನೀರಿನ, **ಅರ್ಣಸೇ**-ಸಮುದ್ರದಂತಿರುವ, **ಉತ್ತುಂಗ...ಗಾಯ**—**ಉತ್ತುಂಗ**-ಎತ್ತರ

**ಯೇನಾಹಮಿಹ ದುರ್ಮಾರ್ಗಾ-ದುದ್ಧೃತ್ಯಾಭಿನಿವೇಶಿತಃ ।
ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ ಪೂರ್ಣಪ್ರಜ್ಞಂ
ನಮಾಮಿ ತಮ್ ॥ ೧೦ ॥**

---

ವಾದ, **ವಾಕ್**-ಮಾತುಗಳೆಂಬ, **ತರಂಗಾಯ**-ಅಲೆಗಳುಳ್ಳ, **ಮಧ್ವಾ...** ಬ್ಧಯೇ—**ಮಧ್ವ**-ಮಧ್ವಾಚಾರ್ಯರೆಂಬ, **ದುಗ್ಧ**-ಕ್ಷೀರದ, **ಅಬ್ಧಯೇ**-ಸಮುದ್ರಕ್ಕೆ, **ನಮಃ**-ನಮಸ್ಕಾರ.

**ತಾತ್ಪರ್ಯ**—ಕ್ಷೀರಸಮುದ್ರದ ಮಧ್ಯದಲ್ಲಿ ಶೇಷಶಾಯಿಯಾದ ಶ್ರೀಮನ್ನಾರಾಯಣ ಸದಾ ವಾಸವಾಗಿರುತ್ತಾನೆ. ಕ್ಷೀರಸಮುದ್ರವು ಹಾಲೆಂಬ ನೀರಿನಿಂದ ತುಂಬಿ ತುಳುಕಾಡುತ್ತಿರುತ್ತದೆ. ಆ ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳು ಸದಾ ಏಳುತ್ತಲೇ ಇರುತ್ತವೆ. ಅದರಂತೆ ಶ್ರೀಮನ್ಮಧ್ವಾಚಾರ್ಯರ ಹೃದಯದಲ್ಲೇ ಶ್ರೀಮನ್ನಾರಾಯಣ ಸದಾ ನೆಲೆಸಿರುತ್ತಾನೆ, ಅವನನ್ನು ಅವರು ಸದಾ ನೋಡುತ್ತಾ ಧ್ಯಾನಮಾಡುತ್ತಿರುತ್ತಾರೆ. ಕ್ಷೀರಸಮುದ್ರವು ನೀರಿನಿಂದ (ಕ್ಷೀರದಿಂದ) ತುಂಬಿ ತುಳುಕಾಡುತ್ತಿರುವಂತೆ ಇವರು ಅನೇಕ ಶಾಸ್ತ್ರಗಳ ಪರಿಶುದ್ಧಜ್ಞಾನದಿಂದ ಪರಿಪೂರ್ಣವಾಗಿದ್ದಾರೆ. ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳು ಬರುತ್ತಿರುವಂತೆ ಮಧ್ವಾಚಾರ್ಯರ ಬಾಯಿಂದ ಉನ್ನತ ಭಾವ ಗರ್ಭಿತವಾದ ವಾಕ್ಸರಣಿಯು ಸಾಲುಸಾಲಾಗಿ ಬರುತ್ತಿರುತ್ತದೆ. ಈ ಪ್ರಕಾರ ಎಲ್ಲಾ ವಿಚಾರಗಳಲ್ಲೂ ಕ್ಷೀರಸಮುದ್ರದಂತೆ ಪರಿಪೂರ್ಣರಾದ ಮಧ್ವಾಚಾರ್ಯರಿಗೆ ನಮಸ್ಕಾರ.

**ಶ್ಲೋಕ ೧೦**—(ಯೇನಾಹಂ) ಈ ಶ್ಲೋಕವೂ ಮಧ್ವಾಚಾರ್ಯರ ಸ್ತುತಿಯೇ, ಇದರಲ್ಲಿ ಅವರು ನಮ್ಮನ್ನು ಹೇಗೆ ಉದ್ಧಾರಮಾಡಿದರೆಂದು ಹೇಳಿದೆ.

**ಅನ್ವಯಾರ್ಥ**—**ಯೇನ**-ಯಾರಿಂದ, **ಅಹಂ**-ನಾನು, **ಇಹ**-ಇಲ್ಲಿ (ಈ ಜನ್ಮದಲ್ಲಿ, ಈ ಸಂಸಾರಕೂಪದಲ್ಲಿ ಅಥವಾ ಈ ಕಲಿಯುಗದಲ್ಲಿ), **ದುರ್ಮಾರ್ಗಾತ್**-ಕೆಟ್ಟ ಮಾರ್ಗದಿಂದ, **ಉದ್ಧೃತ್ಯ**-ಉದ್ಧರಿಸಿ, **ಶ್ರೀವೈಷ್ಣವೇ ಮಾರ್ಗೇ**-ಸದ್ವೈಷ್ಣವ ಮಾರ್ಗದಲ್ಲಿ, **ಸಮ್ಯಕ್**-ಚೆನ್ನಾಗಿ,

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗ-ಕ್ಷೇಮಂ**
**ವಹಾಮ್ಯಹಮ್ ॥ ೧೧ ॥**

---

**ಅಭಿನಿವೇಶಿತಃ**-ಪ್ರವೇಶಿಸಲ್ಪಟ್ಟಿನೋ, **ತಂ**-ಅಂಥಾ, **ಪೂರ್ಣಪ್ರಜ್ಞಂ**-ಪೂರ್ಣಪ್ರಜ್ಞಾಚಾರ್ಯರನ್ನು, **ನಮಾಮಿ**-ನಮಸ್ಕರಿಸುತ್ತೇನೆ.

**ತಾತ್ಪರ್ಯ**—ನಾನು ಅನರ್ಥಕ್ಕೆ ಗುರಿಮಾಡುವ ಯಾವುದೋ ದುರ್ಮಾರ್ಗದಲ್ಲಿ ನಿರತನಾಗಿದ್ದೆ. ಅಂಥಾ ನನ್ನನ್ನು ಆ ದುರ್ಮಾರ್ಗದಿಂದ ತಪ್ಪಿಸಿ, ಹರಿಸರ್ವೋತ್ತಮತ್ವಜ್ಞಾನಪೂರ್ವಕವಾದ ಸದ್ವೈಷ್ಣವಮಾರ್ಗದಲ್ಲಿ ಹೋಗುವಂತೆ ಪ್ರೇರಣೆ ಮಾಡಿದಂಥಾ ಪೂರ್ಣಪ್ರಜ್ಞಾಚಾರ್ಯರಿಗೆ ನಮಸ್ಕಾರ ಮಾಡುತ್ತೇನೆ. (ಪೂರ್ಣಪ್ರಜ್ಞ ಎಂಬುದು ಆಚಾರ್ಯರಿಗೆ ಸಂನ್ಯಾಸವಾದ ಬಳಿಕ ಇಟ್ಟ ಹೆಸರು.)

**ಶ್ಲೋಕ ೧೧**—(ಅನನ್ಯಾಃ) ಇದು ಭಗವದ್ಗೀತೆಯ ಶ್ಲೋಕ (೯ ಅಧ್ಯಾ. ೨೨ ಶ್ಲೋ.) ವೈಷ್ಣವ ಮಾರ್ಗದಲ್ಲಿ ಹೋಗುವಂತೆ ಮಾಡಿದರೆಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಹಾಗೆ ವೈಷ್ಣವಮಾರ್ಗದಲ್ಲಿ ನಡೆಯುವವನನ್ನು ಭಗವಂತನೇ ಕಾಪಾಡುತ್ತಾನೆ ಎಂದು ತಿಳಿಸುವುದಕ್ಕಾಗಿ ಭಗವಂತನ ಈ ಆಶ್ವಾಸನವನ್ನು ಇಲ್ಲಿ ಹೇಳಿದೆ.

**ಅನ್ವಯಾರ್ಥ**—**ಯೇಜನಾಃ**-ಯಾವ ಭಕ್ತಜನರು, **ಅನನ್ಯಾಃ**-ಬೇರೆ ಯಾರನ್ನೂ ಸ್ವತಂತ್ರರೆಂದು ತಿಳಿಯದೆ, **ಮಾಂ**-ನನ್ನನ್ನೇ, **ಚಿಂತಯಂತಃ**-ಧ್ಯಾನಮಾಡುತ್ತಾ, ಪರ್ಯುಪಾಸತೇ—**ಪರಿ**-ಎಲ್ಲಾ ಕಾಲದಲ್ಲೂ, ಹಗಲಿರುಳೂ ಎಡೆಬಿಡದೆ, **ಉಪಾಸತೇ**-ಆರಾಧಿಸುತ್ತಾರೋ, **ತೇಷಾಂ**-ಅಂಥಾ ನಿತ್ಯಾಭಿಯುಕ್ತಾನಾಂ—**ನಿತ್ಯ**-ಸದಾಕಾಲದಲ್ಲೂ (ನಿತ್ಯದಲ್ಲೂ), **ಅಭಿಯುಕ್ತಾನಾಂ**-ನಾನೇ ಗತಿಯೆಂದು ನಂಬಿರುವ ಜನಗಳ, **ಯೋಗಕ್ಷೇಮಂ**—**ಯೋಗ**-ಮೋಕ್ಷ ದೊರಕುವುದನ್ನೂ, **ಕ್ಷೇಮಂ**-ಅದನ್ನು ನಿತ್ಯ ಅನುಭವಿಸುವುದನ್ನೂ, **ಅಹಂ**-ನಾನು (ಶ್ರೀಕೃಷ್ಣನು), **ವಹಾಮಿ**-ವಹಿಸಿಕೊಳ್ಳುತ್ತೇನೆ.

**ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥ ೧೨ ॥**

---

**ತಾತ್ಪರ್ಯ**—ಯಾವ ಭಕ್ತರು ಬೇರೆ ಯಾವ ದೇವತೆಯನ್ನೂ ಸರ್ವ ಶಕ್ತತ್ವೇನ ತಿಳಿಯದೆ ಕೇವಲ ನಾನೇ ಅವರ ಉದ್ಧಾರಕನೆಂದು ದೃಢವಾಗಿ ನಂಬಿ ಹಗಲಿರುಳೂ ನನ್ನನ್ನೇ ಧ್ಯಾನಿಸುತ್ತಿರುತ್ತಾರೋ ಅವರಿಗೆ ಮೋಕ್ಷ ದೊರಕುವ ಭಾರವನ್ನೂ ದೊರಕಿದ ಮೋಕ್ಷಸುಖವು ತಪ್ಪದಂತೆ ಮಾಡುವ ಭಾರವನ್ನೂ ನಾನೇ ವಹಿಸಿಕೊಳ್ಳುತ್ತೇನೆ ಎಂದು ಶ್ರೀಕೃಷ್ಣ ಹೇಳಿದ್ದಾನೆ.

**ಶ್ಲೋಕ ೧೨**—(ಯಃ ಸರ್ವ) 'ತೇಷಾಂ ನಿತ್ಯಾಭಿಯುಕ್ತಾನಾಂ' ಎಂದು ಹಿಂದಿನ ಶ್ಲೋಕದಲ್ಲಿ ಪ್ರಸಕ್ತವಾದ ಭಕ್ತನ ಲಕ್ಷಣವು ಹೇಗಿರ ಬೇಕೆಂದೂ 'ಅನನ್ಯಾಶ್ಚಿಂತಯಂತಃ' ಎಂಬುದರ ಭಾವವೇನು ? ಎಂಬುದನ್ನು ತಿಳಿಸುವುದಕ್ಕಾಗಿ ತಾತ್ಪರ್ಯನಿರ್ಣಯದ ಕಟ್ಟಕಡೆಯ (೩೨ ಅ. ೧೮೨ ಶ್ಲೋ) ಶ್ಲೋಕವನ್ನು ಉದಹರಿಸಿದೆ. ಈ ರೀತಿ ಚಿಂತಿಸುವುದೇ ಅನನ್ಯ ಚಿಂತನೆ ಇದೇ ನಿತ್ಯಾಭಿಯುಕ್ತನ ಲಕ್ಷಣ ಎಂದು ಮಾರ್ಗದರ್ಶನಮಾಡುತ್ತಾರೆ.

**ಅನ್ವಯಾರ್ಥ**—**ಯಃ**-ಯಾವ ವಿಷ್ಣು, ಸರ್ವ....ಪೂರ್ಣಃ—**ಸರ್ವ**-(ಲೋಕದಲ್ಲಿರುವ) ಸಕಲ ಶಬ್ದಗಳೂ ಹೇಳುವ ಎಲ್ಲಾ ವಿಧವಾದ, **ಗುಣ**-ಜ್ಞಾನಾನಂದೈಶ್ವರ್ಯಾದಿ ಗುಣಗಳಿಂದಲೂ, **ಪರಿ**-ನಿರವಧಿಕವಾಗಿ, **ಪೂರ್ಣಃ**-ಪೂರ್ಣವಾದ, ಮತ್ತು ಸರ್ವ....ರ್ಜಿತಃ—**ಸರ್ವ**-ಸಕಲ ವಿಧವಾದ **ದೋಷ**-ಅಜ್ಞಾನ ದುಃಖ ಪಾರತಂತ್ರ್ಯಾದಿ ದೋಷಗಳಿಂದಲೂ, **ವಿವರ್ಜಿತಃ**-ಸುತರಾಂ ದೂರವಾಗಿದ್ದಾನೋ, ಅಂಥಾ, **ಮೇ**-ನನ್ನ, **ಪರಮಃ**-ಸರ್ವ ಶ್ರೇಷ್ಠನೂ ಅತ್ಯಂತ ಆಪ್ತನೂ ಆದ, **ಸುಹೃತ್**-ಮಿತ್ರನಾದ **ವಿಷ್ಣುಃ**-ಶ್ರೀವಿಷ್ಣುವು, **ಪ್ರೀತಃ ಏವ**-ಸದಾ ಪ್ರಸನ್ನನಾಗಿದ್ದರೂ, **ಅಲಂ**-ಇನ್ನೂ ಹೆಚ್ಚಾಗಿ, **ಪ್ರೀಯತಾಂ**-ಪ್ರೀತನಾಗಲಿ.

**ತಾತ್ಪರ್ಯ**—ಶ್ರೀವಿಷ್ಣು ಜ್ಞಾನಾನಂದೈಶ್ವರ್ಯಾದಿ ಅನಂತ ಗುಣ ಗಳಿಂದ ಪರಿಪೂರ್ಣನಾಗಿದ್ದಾನೆ. ಅವನಲ್ಲಿ ಅಜ್ಞಾನ ದುಃಖ, ಜನನ ಮರಣ

**ಸೂಕ್ತಿರತ್ನಾಕರೇ ರಮ್ಯೇ ಮೂಲರಾಮಾಯಣಾರ್ಣವೇ ।**
**ವಿಹರಂತೋ ಮಹೀಯಾಂಸಃ ಪ್ರೀಯತಾಂ ಗುರವೋ ಮಮ ॥ ೧೩ ॥**

---

ರೋಗರುಜಿನ, ವೈಷಮ್ಯ ನೈರ್ಘೃಣ್ಯ ಮೊದಲಾದ ಯಾವ ದೋಷದ ಕಿಂಚಿದ್ ಗಂಧವೂ ಸಹ ಇಲ್ಲ. ಆ ಸ್ವಾಮಿ ಮಧ್ವಾಚಾರ್ಯರ ಅತ್ಯಂತ ಆಪ್ತನಾದ ಪರಮಶ್ರೇಷ್ಠ ಸ್ನೇಹಿತ. ಅವನು ಅವರಮೇಲೆ ದಯಾನ್ವಿತನಾಗಿ ಸದಾ ಪ್ರೀತನಾಗೇ ಇರುತ್ತಾನೆ. ಆದರೂ ಇನ್ನೂ ಹೆಚ್ಚು ಪ್ರಸನ್ನನಾಗಲಿ ಎಂದು ಆಚಾರ್ಯರು ಪ್ರಾರ್ಥಿಸುತ್ತಾರೆ.

**ಶ್ಲೋಕ ೧೩—(ಸೂಕ್ತಿ)** ಈ ಶ್ಲೋಕ ನಾರಾಯಣ ಪಂಡಿತಾಚಾರ್ಯರ 'ಸಂಗ್ರಹ ರಾಮಾಯಣ'ದ ಪ್ರಾರಂಭದಲ್ಲಿ ಮಂಗಳ ಶ್ಲೋಕಗಳ ಮಧ್ಯೆ ಬಂದಿದೆ. 'ಬ್ರಹ್ಮಾಂತಾ ಗುರವಃ' ಎಂದು ಹೇಳಿದಂತೆ ರಾಮಾಯಣಾದಿ ಗ್ರಂಥಗಳಲ್ಲಿ ಪ್ರಖ್ಯಾತರಾದ ಎಲ್ಲ ಗುರುಗಳಿಗೂ ವಂದಿಸುವ ಕ್ರಮವನ್ನು ತೋರಿಸಿಕೊಡುತ್ತಾರೆ.

**ಅನ್ವಯಾರ್ಥ**—ಸೂಕ್ತಿ....ಕರೇ—**ಸು**-ಉತ್ತಮವಾದ (ಹಿತಕರವಾದ), **ಉಕ್ತಿ**-ಹೇಳಿಕೆಗಳೆಂಬ, **ರತ್ನ**-ನವರತ್ನಗಳಿಗೆ, **ಆಕರೇ**-ಗಣಿಯಂತೆ ಇದ್ದು, **ರತ್ನಾಕರೇ**-(ಪುನಃ ಅನ್ವಯಿಸಿಕೊಳ್ಳಬೇಕು) ಸಮುದ್ರದಂತೆ ಅಗಾಧವಾಗಿರುವ, **ರಮ್ಯೇ**-ಮನೋಹರವಾದ, ಮೂಲ....ರ್ಣವೇ—**ಮೂಲ-ರಾಮಾಯಣ**-(ಶ್ರೀಮನ್ನಾರಾಯಣನಿಂದ ರಚಿತವಾಗಿ ನೂರು ಕೋಟಿ ವಿಸ್ತಾರವಾದ) ಮೂಲರಾಮಾಯಣವೆಂಬ, **ಅರ್ಣವೇ**-ಸಮುದ್ರದಲ್ಲಿ, **ವಿಹರಂತಃ**-ವಿಹರಿಸುತ್ತಿರುವ, **ಮಹೀಯಾಂಸಃ**-ಮಹಾತ್ಮರಾದ, **ಮಮ**-ನನ್ನ, **ಗುರವಃ**-ಗುರುಗಳು, **ಪ್ರೀಯಂತಾಂ**-ಪ್ರೀತರಾಗಲಿ.

**ಸೂಚನೆ :**—ಈ ಶ್ಲೋಕ 'ಸಂಗ್ರಹ ರಾಮಾಯಣ'ದಲ್ಲಿರುವುದರಿಂದ ಆ ಸಂದರ್ಭಕ್ಕೆ ಅನುಗುಣವಾಗಿ ಆ ಕವಿಗಳು 'ಮೂಲರಾಮಾಯಣೇ' ಎಂದು ಮಾತ್ರ ಹೇಳಿದ್ದಾರೆ. ಆದರೆ ಇದನ್ನು ನಾವು ಪ್ರತಿನಿತ್ಯ ಹೇಳಿಕೊಳ್ಳುವಾಗ ಇದರ ವ್ಯಾಪ್ತಿಯನ್ನು ಬೆಳೆಸಿ 'ಸೂಕ್ತಿರತ್ನಾಕರೇ' ಎಂಬುದಕ್ಕೇ ಮಹಾಭಾರತ-ಭಾಗವತ-ಪಂಚರಾತ್ರಾದಿಗಳಲ್ಲೂ ಎಂದೂ ' ಅರ್ಥ ಹೇಳಿಕೊಂಡರೆ ಎಲ್ಲ

**ಹನೂ(ನು)ಮಾ-ನಂಜನೀಸೂನುರ್ ವಾಯುಪುತ್ರೋ ಮಹಾಬಲಃ ।**
**ರಾ(ಭೀ)ಮೇಷ್ಟಃ ಫಲ್ಗುನಸಖಃ ಪಿಂಗಾಕ್ಷೋಽಮಿತವಿಕ್ರಮಃ ॥ ೧೪ ॥**

---

ಗುರುಗಳೂ ಇದರಲ್ಲಿ ಅಡಕವಾಗುತ್ತಾರೆ. ಅಲ್ಲದೆ 'ವಿಹರಂತಃ' ಎಂದರೆ ರಾಮಾಯಣದಲ್ಲಿ ಕೀರ್ತಿತರಾದ ಅಥವಾ ಉಕ್ತರಾದ ಎಂಬ ಅರ್ಥದ ಜೊತೆ ಈ ಗ್ರಂಥಗಳನ್ನು 'ಓದಿ ಆನಂದಪಡುವ' ಎಂಬ ಅರ್ಥ ಹೇಳಿದರೆ ಶ್ರೀಮತ್ ಪದ್ಮನಾಭತೀರ್ಥಾದಿ ನಮ್ಮ ಗುರುಪರಂಪರೆಯ ಗುರುಗಳೂ ಸೇರಿಕೊಳ್ಳುತ್ತಾರೆ. ಆದ್ದರಿಂದ ತಾತ್ಪರ್ಯದಲ್ಲಿ ವಿಶಾಲವಾದ ಈ ಅರ್ಥವನ್ನೇ ಮನಸ್ಸಿನಲ್ಲಿಟ್ಟು ಕೊಂಡು ಎಲ್ಲವನ್ನೂ ಸೇರಿಸಿದೆ.

**ತಾತ್ಪರ್ಯ**—ಸೂಕ್ತಿಗಳಿಗೆ ಗಣಿಯಂತಿರುವ ಶತಕೋಟಿ ವಿಸ್ತಾರವುಳ್ಳ ಮೂಲರಾಮಾಯಣದಲ್ಲೂ ಮಹಾಭಾರತದಲ್ಲೂ ಪಂಚರಾತ್ರದಲ್ಲೂ ಭಾಗವತಾದಿ ಪುರಾಣಗಳಲ್ಲೂ ಅಪೌರುಷೇಯವಾದ ವೇದಗಳಲ್ಲೂ ಪ್ರಸಕ್ತರಾಗಿ ಬಂದಿರುವ ಎಲ್ಲ ಮಹಾತ್ಮರೂ ಹಾಗೆಯೇ ಆ ಗ್ರಂಥಗಳ ಅಧ್ಯಯನದಲ್ಲೇ ನಿರತರಾದ (ಪರಂಪರಾಪ್ರಾಪ್ತರಾದ) ಎಲ್ಲರೂ ನನಗೆ ಗುರುಗಳೇ ಆಗಿ ವಂದ್ಯರಾಗಿದ್ದಾರೆ. ಅವರೆಲ್ಲರಿಗೂ ನಾನು ಭಕ್ತಿಯಿಂದ ವಂದಿಸುತ್ತೇನೆ. ಎಲ್ಲರೂ ಪ್ರೀತರಾಗಿ ಅನುಗ್ರಹಮಾಡಲಿ.

**ಶ್ಲೋಕ ೧೪-೧೫**—ಹನುಮದ್ ದ್ವಾದಶನಾಮಾವಳಿಃ ಇಲ್ಲಿಂದ ಮುಂದೆ ಕ್ರಮವಾಗಿ ಹನುಮ-ಭೀಮ-ಮಧ್ವಾವತಾರಗಳ ದ್ವಾದಶನಾಮಾವಳಿಯನ್ನೂ ಅವುಗಳ ಫಲಶ್ರುತಿಗಳನ್ನೂ ಪಠಿಸಿದೆ.

**ಅನ್ವಯಾರ್ಥ**—೧) **ಹನುಮಾನ್**-ಹನು ಎಂದರೆ ಜ್ಞಾನ ('ಹನುಶಬ್ದೋ ಜ್ಞಾನವಾಚೀ' ಎಂದು ಉಪನಿಷದ್ಭಾಷ್ಯಗಳಲ್ಲಿ ಹೇಳಿದೆ), ಅದುಳ್ಳವನು ಎಂದರೆ ಮಹಾಜ್ಞಾನಿ, ಸರ್ವಜ್ಞ ಎಂದರ್ಥ. ಹನುಃ ಜ್ಞಾನಂ ಅಸ್ಯಾಸ್ತೀತಿ ಹನುಮಾನ್-ಜ್ಞಾನಸಂಪನ್ನ ಇತ್ಯರ್ಥಃ. ೨)-**ಅಂಜನೀಸೂನುಃ**-(ಅಂಜನ್ಯಾಃ ಸೂನುಃ-ಪುತ್ರಃ) ಅಂಜನೀ ಅಥವಾ ಅಂಜನಾ ಎಂಬುದು ಹನುಮಂತನ ತಾಯಿಯ ಹೆಸರು. ಸೂನುಃ ಎಂದರೆ ಮಗ. ಅಂಜನಾದೇವಿಯ ಮಗ ಅಥವಾ ಆಂಜನೇಯ, ೩)-**ವಾಯುಪುತ್ರಃ (ವಾಯೋಃ ಪುತ್ರಃ)**

**ಉದಧಿಕ್ರಮಣಶ್ಚೈವ ಸೀತಾಸಂದೇಶಹಾ(ಕಾ)ರಕಃ ।**
**ಲಕ್ಷ್ಮಣಪ್ರಾಣದಾತಾ ಚ ದಶಗ್ರೀವಸ್ಯ ದರ್ಪಹಾ ॥ ೧೫ ॥**

---

ವಾಯುದೇವರ ಅಂಶದಿಂದ ಹುಟ್ಟಿದವನು, ವಾಯುಕುಮಾರ, ೪)–**ಮಹಾಬಲಃ** (ಮಹತ್ ಬಲಂ ಯಸ್ಯಸಃ) ಅಪರಿಮಿತ ಬಲವುಳ್ಳವನು, ೫) **ರಾಮೇಷ್ಟಃ**–(ಪಾಠಾಂತರ **ಭೀಮೇಷ್ಟಃ**). ರಾಮಸ್ಯ ಇಷ್ಟಃ-ಪ್ರಿಯೋ ವಾ ರಾಮಃ ಇಷ್ಟಃ ಯಸ್ಯಸಃ । ರಾಮನಿಗೆ ಬಹಳ ಪ್ರಿಯನಾದವನು ಅಥವಾ ಶ್ರೀರಾಮನೊಬ್ಬನೇ ಯಾರಿಗೆ ಪ್ರಿಯನಾಗಿದ್ದಾನೋ ಅವನು ರಾಮನ ಏಕಾಂತ ಭಕ್ತ. (ಭೀಮಸ್ಯ ಇಷ್ಟಃ) ಸೌಗಂಧಿಕಾಹರಣ ಸಮಯದಲ್ಲಿ ಹನುಮ-ಭೀಮರು ಭೆಟ್ಟಿಯಾದ ವಿಚಾರ ವಾಯುಸ್ತುತಿಯ ೨೭ನೇ ಶ್ಲೋಕದಲ್ಲಿ ಬಂದಿದೆ. ಹೀಗೆ ಭೀಮನಿಗೆ ಪ್ರಿಯನಾದವನು. ಭೀಮನು ಪ್ರಾರ್ಥಿಸಿಕೊಂಡಿದ್ದರಿಂದಲೇ ಹನುಮಂತ ಅರ್ಜುನನ ರಥದ ಧ್ವಜದಲ್ಲಿ ಬಂದು ಕುಳಿತು ಅರ್ಜುನನಿಗೆ ಜಯ ತಂದುಕೊಟ್ಟ. ಆದ್ದರಿಂದಲೇ ಅರ್ಜುನನಿಗೆ 'ಕಪಿಧ್ವಜ'ನೆಂದೂ ಹೆಸರಿದೆ. ೬)–**ಫಲ್ಗುನಸಖಃ** (ಫಲ್ಗುನಸ್ಯ-ಅರ್ಜುನಸ್ಯ ಸಖಾ-ಸುಹೃತ್) ಅರ್ಜುನನಿಗೆ ಪ್ರಿಯನಾದವನು. ೭)–**ಪಿಂಗಾಕ್ಷಃ** (ಪಿಂಗೇ ಅಕ್ಷಿಣೀ ಯಸ್ಯ ಸಃ) ಗೋರೋಜನದ ಬಣ್ಣವುಳ್ಳ ಕಣ್ಣುಗಳುಳ್ಳವನು. ೮) **ಅಮಿತವಿಕ್ರಮಃ** (ಅಮಿತಃ ವಿಕ್ರಮಃ ಪರಾಕ್ರಮಃ ಯಸ್ಯ ಸಃ) ಅಪಾರವಾದ ಪರಾಕ್ರಮವುಳ್ಳವನು, ಅದ್ವಿತೀಯ ಪರಾಕ್ರಮಶಾಲಿ. ೯) **ಉದಧಿಕ್ರಮಣಃ**–(ಉದಧೇಃ–ಸಮುದ್ರಸ್ಯ ಕ್ರಮಣಂ-ಲಂಘನಂ ಯಸ್ಯ, ಯೇನ ವಾ ಸಃ) ಸಮುದ್ರವನ್ನು ದಾಟಿದವನು. ೧೦) **ಸೀತಾಸಂದೇಶಹಾ(ಕಾ)ರಕಃ**–(ಸೀತಾಯಾಃ ಸಂದೇಶಂ ರಾಮಂ ಪ್ರತಿ ಹರತಿ, ಕರೋತೀತಿ ವಾ) ಸೀತೆಯ ಸಂದೇಶವನ್ನು ರಾಮದೇವರಿಗೆ ಮುಟ್ಟಿಸಿದವನು. ೧೧) **ಲಕ್ಷ್ಮಣಪ್ರಾಣದಾತಾ**–(ದದಾತೀತಿ ದಾತಾ । ಲಕ್ಷ್ಮಣಸ್ಯ ಪ್ರಾಣಾಃ ಲಕ್ಷಣಪ್ರಾಣಾಃ (ತೇಷಾಂ ದಾತಾ) ಮೂರ್ಛಿತನಾಗಿ ಬಿದ್ದಿದ್ದ ಲಕ್ಷ್ಮಣನಿಗೆ ಸಂಜೀವನ ಪರ್ವತ ತಂದು ಪ್ರಾಣ ಬರುವಂತೆ ಮಾಡಿದವನು. ೧೨) **ದಶಗ್ರೀವಸ್ಯ ದರ್ಪಹಾ**– ದರ್ಪಂ ಹಂತೀತಿ ದರ್ಪಹಾ । ದಶಗ್ರೀವಸ್ಯ ರಾವಣಸ್ಯ ದರ್ಪಹಾ-ಗರ್ವಹಾರಕಃ) ರಾವಣನ ಗರ್ವವನ್ನು ಮುರಿದವನು.

**ದ್ವಾದಶೈತಾನಿ ನಾಮಾನಿ ಕಪೀಂದ್ರಸ್ಯ ಮಹಾತ್ಮನಃ ।**
**ಸ್ವಾಪಕಾಲೇ ಪ್ರಬೋಧೇ ಚ ಯಾತ್ರಾಕಾಲೇ ಚ**
**ಯಃ ಪಠೇತ್ ॥ ೧೬ ॥**
**ನ ಭಯಂ ವಿದ್ಯತೇ ತಸ್ಯ ಸರ್ವತ್ರ ವಿಜಯೀ ಭವೇತ್ ।**
**ದುಃಸ್ವಪ್ನಾನಿ ವಿನಶ್ಯಂತಿ ಕ್ಷೀಯಂತೇ ಪಾಪರಾಶಯಃ ॥ ೧೭ ॥**

---

**ಶ್ಲೋಕ ೧೬-೧೭**—(ಫಲಶ್ರುತಿ) **ಅನ್ವಯಾರ್ಥ—ಮಹಾತ್ಮನಃ**-ಮಹಾತ್ಮನಾದ, **ಕಪೀಂದ್ರಸ್ಯ**-ಕಪಿಶ್ರೇಷ್ಠನಾದ ಹನುಮಂತನ, **ಏತಾನಿ**-ಈ, **ದ್ವಾದಶ ನಾಮಾನಿ**-ಹನ್ನೆರಡು ಹೆಸರುಗಳ ನಾಮಾವಳಿಯನ್ನು, **ಸ್ವಾಪ-ಕಾಲೇ**-ಮಲಗುವ ಮುಂಚೆಯಾಗಲಿ, **ಪ್ರಬೋಧೇ ಚ**-ಜಾಗ್ರದವಸ್ಥೆಯಲ್ಲೂ (ಎಚ್ಚರವಾಗಿದ್ದ ಕಾಲದಲ್ಲೂ), **ಯಾತ್ರಾಕಾಲೇ ಚ**-ಪ್ರಯಾಣ ಆರಂಭಿಸುವ ಮತ್ತು ಮಾಡುತ್ತಿರುವ ಕಾಲದಲ್ಲೂ, **ಯಃ**-ಯಾರು, **ಪಠೇತ್**-ಪಠಿಸುವನೋ **ತಸ್ಯ**-ಅವನಿಗೆ, **ಭಯಂ**-ಭಯವು, **ನ ವಿದ್ಯತೇ**-ಇರುವುದಿಲ್ಲ. **ಸರ್ವತ್ರ**-ಎಲ್ಲಾ ಕಡೆಯೂ, **ವಿಜಯೀ**-ಜಯಶಾಲಿಯಾಗಿ, **ಭವೇತ್**-ಆಗುವನು. **ದುಃಸ್ವಪ್ನಾನಿ**-ಕೆಟ್ಟ ಸ್ವಪ್ನಗಳಾಗುವುದು, **ನಶ್ಯಂತಿ**-ನಾಶವಾಗುತ್ತವೆ. **ಪಾಪರಾಶಯಃ**-ಪಾಪದ ರಾಶಿಗಳು, **ಕ್ಷೀಯಂತೇ**-ಕ್ಷಯಿಸಿಹೋಗುತ್ತವೆ.

**ತಾತ್ಪರ್ಯ—(೧೬-೧೭)** ಹನುಮಂತದೇವರ ಈ ಹನ್ನೆರಡು ನಾಮಗಳನ್ನು ಮಲಗಿಕೊಳ್ಳುವುದಕ್ಕೆ ಮುಂಚೆಯೂ, ಎಚ್ಚರವಾಗಿದ್ದಾಗಲೂ, ಪ್ರಯಾಣ ಹೊರಡುವಾಗಲೂ, ಪ್ರಯಾಣ ಮಾಡುತ್ತಿದ್ದಾಗಲೂ ಸ್ಮರಣೆ ಮಾಡಿಕೊಂಡರೆ ಅವನಿಗೆ ಯಾವ ಭಯವೂ ಇರುವುದಿಲ್ಲ, ಸರ್ವತ್ರ ಜಯಶಾಲಿ ಆಗುತ್ತಾನೆ. ರಾತ್ರಿ ಕೆಟ್ಟ ಕನಸ್ಸುಗಳು ಬೀಳುತ್ತಿದ್ದರೆ ನಿಂತುಹೋಗುವುದು, ಮಾಡಿದ ಪಾಪಗಳೂ ಕ್ಷಯಿಸಿಹೋಗುತ್ತವೆ.

**ಶ್ಲೋಕ ೧೮-೧೯**—(**ಭೀಮನ ದ್ವಾದಶ ನಾಮಾವಳಿ**)—೧) **ಮಾರುತಿಃ**-(ಮರುತಃ ಅಪತ್ಯಂ ಪುಮಾನ್) ಮರುತ್ ಎಂದರೆ ವಾಯುದೇವರು, ಅವರ ಅಂಶದಿಂದ ಹುಟ್ಟಿದ್ದರಿಂದ ಮಾರುತಿ. (ಹನುಮಂತನೂ ವಾಯುಪುತ್ರನಾದ್ದರಿಂದ ಅವನಿಗೂ 'ಮಾರುತಿ' ಎಂಬ ಹೆಸರಿದೆ.) ೨) **ಪಾಂಡವಃ**-(ಪಾಂಡೋಃ ಅಪತ್ಯಂ ಪುಮಾನ್) ಪಾಂಡುರಾಜನ ಮಗ. ೩)

**ಮಾರುತಿಃ ಪಾಂಡವೋ ಭೀಮೋ ಗದಾಪಾಣಿರ್ ವೃಕೋದರಃ ।**
**ಕೌಂತೇಯಃ ಕೃಷ್ಣದೂತಶ್ಚ ಭೀಮಸೇನೋ ಮಹಾಬಲಃ ॥ ೧೮ ॥**
**ಜರಾಸಂಧಾಂತಕೋ ವೀರೋ ದುಶ್ಯಾಸನ ವಿನಾಶನಃ ।**
**ಭೀಮಸ್ಯ ದ್ವಾದಶೈತಾನಿ (ಪಾಠಾಂ. ದ್ವಾದಶೈತಾನಿ ಭೀಮಸ್ಯ)**
**ನಾಮಾನಿ ನಿಯತಂ ಪಠನ್ ॥ ೧೯ ॥**

---

**ಭೀಮ**–'ಭೃತಮೋ ಭೀಮ ಇತ್ಯುಕ್ತಃ' ಎಂದು ಉಪನಿಷದ್ಭಾಷ್ಯಗಳಲ್ಲಿ ಹೇಳಿದೆ. **ಮಾಃ** ಎಂದರೆ ಪ್ರಮಾಣಗಳು ಎಂದರ್ಥ. ೪ ಪ್ರಮಾಣಗಳು ನಾಲ್ಕು ವೇದಗಳು, ೫) ಇತಿಹಾಸ (ಎಂದರೆ ಮೂಲರಾಮಾಯಣ ಮತ್ತು ಮಹಾಭಾರತ), ೬) ಭಾಗವತಾದಿ ಪುರಾಣಗಳು, ೭) ಪಂಚರಾತ್ರ ಎಂದು ಏಳು ಇವೆ. ಈ ಏಳು ಮಾ (ಪ್ರಮಾಣ)ಗಳನ್ನು, ಭೀ ಎಂದರೆ ಧರಿಸಿದವನು ಎಂದರ್ಥ ಭೃ ಧಾತುವಿನ ಋಕಾರವು ಈಕಾರವಾಗಿ ಬದಲಾಯಿಸಿದೆ. ೪) **ಗದಾಪಾಣಿಃ** (ಗದಾ ಪಾಣೌ-ಹಸ್ತೇಯಸ್ಯ ಸಃ) ಗದಾ–ಗದೆಯನ್ನು, ಪಾಣಿ–ಕೈಯಲ್ಲಿ ಹಿಡಿದಿರುವವನು. ೫) **ವೃಕೋದರಃ**-ವೃಕ ಎಂಬುದು ಭೀಮಸೇನನಲ್ಲಿದ್ದ ಜಾಠರಾಗ್ನಿಯ ಹೆಸರು. (ವೃಕಃ ಉದರೇ ಯಸ್ಯ ಸಃ) ವೃಕವೆಂಬ ಜಾಠರಾಗ್ನಿಯು ಉದರದಲ್ಲಿ ಉಳ್ಳವನು ಎಂದರ್ಥ ಅಥವಾ ಭಕ್ತಿ-ಜ್ಞಾನಾದಿ ದಶಗುಣಗಳಿಗೂ ವೃಕ ಎಂದರ್ಥವಿದೆ, ಅವುಗಳುಳ್ಳವನು. ೬) **ಕೌಂತೇಯಃ**–(ಕುಂತ್ಯಾಃ ಅಪತ್ಯಂ ಪುಮಾನ್) ಕುಂತಿಯ ಮಗ. ೭) **ಕೃಷ್ಣದೂತಃ**–ಶ್ರೀಕೃಷ್ಣನ ದೂತ. ೮) **ಭೀಮಸೇನಃ** (ಇನೇನ-ವಿಷ್ಣುನಾ ಸಹ ವರ್ತತ ಇತಿ ಸೇನಃ । ಭೀಮಶ್ಚಾಸೌ ಸೇನಶ್ಚ ಭೀಮಸೇನಃ) ಭೀಮ ಶಬ್ದಾರ್ಥ ಮೇಲೆ ಹೇಳಿದೆ. ಇನ ಎಂದರೆ ವಿಷ್ಣು ಎಂದರ್ಥ, ಸ ಎಂದರೆ ಸಹ, ಸಹಿತ ಎಂದರ್ಥ. ಇನ-ವಿಷ್ಣುವಿನ, ಸ–ಜೊತೆ ಇರುವುದರಿಂದ ಸೇನ. ಭೀಮನೂ ಸೇನನೂ ಆದ್ದರಿಂದ ಭೀ ಮ ಸೇ ನ. ೯) **ಮಹಾಬಲಃ**–ಮಹಾ ಬಲಿಷ್ಠ, ೧೦) **ಜರಾಸಂಧಾಂತಕಃ**–ಜರಾಸಂಧನನ್ನು ಸಂಹರಿಸಿದವನು. ೧೧) **ವೀರಃ**–ವೀರಾಗ್ರಣಿ. ೧೨) **ದುಃಶಾಸನವಿನಾಶನಃ**–ದುಃಶಾಸನನ ಹೊಟ್ಟೆಯನ್ನು ಬಗೆದು ಸಂಹರಿಸಿದವನು.

**ಆಯುರಾರೋಗ್ಯಸಂಪತ್ತಿ-ಮರಿಪಕ್ಷಕ್ಷಯಂ ಲಭೇತ್ ।**
**ಪೂರ್ಣಪ್ರಜ್ಞೋ ಜ್ಞಾನದಾತಾ ಮಧ್ವೋ ಧ್ವಸ್ತದುರಾಗಮಃ ॥ ೨೦ ॥**
**ತತ್ತ್ವಜ್ಞೋ ವೈಷ್ಣವಾಚಾರ್ಯೋ ವ್ಯಾಸಶಿಷ್ಯೋ ಯತೀಶ್ವರಃ ।**
**ಶುಭತೀರ್ಥಾಭಿಧಾನಶ್ಚ ಜಿತವಾದೀ (ಜಿತಾಮಿತ್ರೋ)**
**ಜಿತೇಂದ್ರಿಯಃ ॥ ೨೧ ॥**

---

**ಶ್ಲೋಕ ೧೯ (ಭೀಮನಾಮಾವಳಿ ಫಲಶ್ರುತಿ)**—ಭೀಮನ ಈ ಹನ್ನೆರಡು ನಾಮಗಳನ್ನು ನಿಯಮದಿಂದ ಪಠನಮಾಡಿದರೆ ಆಯುಸ್ಸು ಆರೋಗ್ಯದ ಸಂಪತ್ತು ವೃದ್ಧಿಯಾಗುತ್ತದೆ, ಶತ್ರುಗಳು ನಾಶಹೊಂದುತ್ತಾರೆ.

**ಶ್ಲೋಕ ೨೦-೨೨ (ಮಧ್ವಾಚಾರ್ಯರ ದ್ವಾದಶ ನಾಮಾವಳಿ)**—೧. **ಪೂರ್ಣಪ್ರಜ್ಞಃ** (ಇದು ಆಚಾರ್ಯರ ಆಶ್ರಮನಾಮ) (ಪೂರ್ಣಾ ಪ್ರಜ್ಞಾ-ಪ್ರಮತಿಃ ಯಸ್ಯ ಸಃ) ಪೂರ್ಣ-ಪರಿಪೂರ್ಣವಾದ, ಪ್ರಜ್ಞಾ-ಜ್ಞಾನ ಉಳ್ಳವರು, ('ಪ್ರ' ಉಪಪದ ಅಜ್ಞಾನದ ಸ್ಪರ್ಶವೂ ಇಲ್ಲದವರೆಂಬುದನ್ನು ತೋರಿಸುತ್ತದೆ. ೨. **ಜ್ಞಾನದಾತಾ** (ಜ್ಞಾನಂ ದದಾತೀತಿ) ಜ್ಞಾನವನ್ನು ಕೊಡುವವರು ಅಥವಾ ಅನುಗ್ರಹಿಸುವವರು, (ಅಜ್ಞಾನದಾತಾ ಎಂದೂ ಪದಚ್ಛೇದವಾಗಬಹುದು. ಆಗ ತಮೋಯೋಗ್ಯರಿಗೆ ಅಜ್ಞಾನವನ್ನೇ ಕೊಡುವವರು ಎಂದರ್ಥ. ಅಥವಾ ಅಜ್ಞಾನಂ ದ್ಯತಿ-ಖಂಡಯತೀತಿ ವಾ. ಸಜ್ಜನರ ಅಜ್ಞಾನವನ್ನು ದ್ಯತಿ-ಖಂಡಿಸುವವರು-ನಾಶಮಾಡುವವರು ಎಂದೂ ಅರ್ಥ.) ೩. **ಮಧ್ವಃ** ('ಮಧ್ವಿತ್ಯಾನಂದ ಉದ್ದಿಷ್ಟೋ' ವೇತಿತೀರ್ಥಮುದಾಹೃತಮ್ । ಮಧ್ವ ಆನಂದತೀರ್ಥಃಸ್ಯಾತ್-ಉಪನಿಷದ್ಭಾಷ್ಯಗಳ ವಾಕ್ಯಗಳು) **ಮಧು** ಎಂದರೆ ಆನಂದ, **ವ** ಎಂದರೆ ತೀರ್ಥ ಅಥವಾ ಶಾಸ್ತ್ರ ಎಂದರ್ಥ. ಆದ್ದರಿಂದ ಮಧ್ವ ಎಂದರೆ ಆನಂತತೀರ್ಥ ಎಂದೇ ಅರ್ಥ (೧೨ನೇ ನಾಮ ನೋಡಿ.) ೪. **ಧ್ವಸ್ತದುರಾಗಮಃ**-ಧ್ವಸ್ತ-ಖಂಡಿಸಲ್ಪಟ್ಟ, ದುರಾಗಮಃ-ಬೌದ್ಧ ಜೈನಾದಿ ಅವೈದಿಕ ಮತಗಳೂ ವೈದಿಕವಾದರೂ ತಪ್ಪು ಸಿದ್ಧಾಂತ ಹೇಳುವ ಮಾಯಾವಾದಿ ಮತಗಳುಳ್ಳವರು, ದುರ್ಮತಗಳ ಸಿದ್ಧಾಂತವನ್ನು ಖಂಡಿಸಿದವರು, ೫. **ತತ್ತ್ವಜ್ಞಃ**-ನಿಜವಾದ (ಸರಿಯಾದ) ಶಾಸ್ತ್ರಾರ್ಥವನ್ನು ತಿಳಿದವರು, ೬. **ವೈಷ್ಣವಾಚಾರ್ಯಃ**-ವಿಷ್ಣುವೇ ಸರ್ವೋತ್ತಮನೆಂದು

**ಶ್ರೀಮದಾನಂದತೀರ್ಥ ಸನ್ನಾಮ್ನ್ಯಾ ಹ್ಯೇವಂ (ಸನ್ನಾಮ್ನೇ-ತ್ಯೇವಂ) (ಸನ್ನಾಮ್ನಾ-ಮೇವಂ) (ಅಥವಾ ಶ್ರೀಮದಾನಂದ-ಸನ್ನಾಮ್ನ್ಯಾ ಹ್ಯೇವಂ** ಇತಿ ಯುಕ್ತಿಮಲ್ಲಿಕಾ ಪಾಠಃ) **ದ್ವಾದಶಕಂ ಪಠನ್ (ಜಪೇತ್)** ।
**ಲಭತೇ ವೈಷ್ಣವೀಂ ಭಕ್ತಿಂ ಗುರುಭಕ್ತಿ-ಸಮನ್ವಿತಾಮ್** ॥ ೨೨ ॥

---

ಸ್ಥಾಪಿಸಿದ ಆಚಾರ್ಯರು, ೭. **ವ್ಯಾಸಶಿಷ್ಯಃ**–ವೇದವ್ಯಾಸರ ಶಿಷ್ಯರು, ೮. **ಯತೀಶ್ವರಃ**–ಸಂನ್ಯಾಸಿಶಿರೋಮಣಿಗಳು, ೯. **ಶುಭತೀರ್ಥಾಭಿಧಾನಃ**–(ಶುಭಂ-ಶುಭಕರಂ, ತೀರ್ಥಂ-ಶಾಸ್ತ್ರಂ ಯಸ್ಮಾದ್ಯಸ್ಯ ವಾ ಶುಭತೀರ್ಥಃ । ಶುಭ ತೀರ್ಥ ಇತ್ಯಭಿಧಾನಂ-ನಾಮ ಯಸ್ಯ ಸಃ) ಶುಭ–ಶುಭಕರವಾದ, **ತೀರ್ಥ**–ಶಾಸ್ತ್ರವನ್ನು ರಚಿಸಿದ್ದರಿಂದ ಶುಭತೀರ್ಥರು. ಶುಭತೀರ್ಥ ಎಂಬ, ಅಭಿಧಾನಃ–ಹೆಸರುಳ್ಳವರು, ೧೦. **ಜಿತವಾದೀ**–(ಜಿತಾಃ ವಾದಿನಃ ಯೇನ ಸಃ । ತಾಚ್ಛೀಲ್ಯೇಣಿನಿಃ) ಸ್ವಭಾವತಃ ಸಕಲ ವಾದಿಗಳನ್ನೂ ಗೆಲ್ಲುವವರು, ೧೧. **ಜಿತೇಂದ್ರಿಯ** (ಜಿತಾನಿ ಇಂದ್ರಿಯಾಣಿ ಯೇಗ ಸಃ) ಸಕಲೇಂದ್ರಿಯಗಳನ್ನೂ ಭಗವದಿತರತ್ರ ಹೋಗದಂತೆ ನಿಗ್ರಹಿಸುವವರು, ೧೨. **ಶ್ರೀಮದಾನಂದತೀರ್ಥ ಸನ್ನಾಮಾ** ಆನಂದಕರಂ ತೀರ್ಥಂ-ಶಾಸ್ತ್ರಂ ಯೇನ ಸಃ ಆನಂದತೀರ್ಥಃ । ಶ್ರೀಮಾಂಶ್ಚಾಸೌ ಆನಂದತೀರ್ಥಶ್ಚ । ಶ್ರೀಮತ್–ಕಾಂತಿಯುಳ್ಳ ಅಥವಾ ಸಂಪದ್ಯುಕ್ತರಾದ ಅಥವಾ ಶುಭಪ್ರದರಾದ, ಆನಂದವನ್ನು ಕೊಡುವ ಶಾಸ್ತ್ರವನ್ನು ರಚಿಸಿದವರು. **(ಫಲಶ್ರುತಿ)** ಶ್ರೀಮದಾಚಾರ್ಯರ ಈ ದ್ವಾದಶ ನಾಮಾವಳಿಯನ್ನು ಪಠಿಸಿದರೆ ಗುರುಭಕ್ತಿಸಹಿತವಾದ ವಿಷ್ಣುಭಕ್ತಿಯನ್ನು ಪಡೆಯುತ್ತಾನೆ ಅಥವಾ ವಿಷ್ಣುಭಕ್ತಿಯನ್ನೂ ತಾರತಮ್ಯಾನುಸಾರ ಗುರಭಕ್ತಿಯನ್ನೂ ಹೊಂದುತ್ತಾನೆ.

**ಶ್ಲೋಕ ೨೩**—(ಮನೋಜವಂ) ಇದು ಪ್ರಸಿದ್ಧವಾದ ಹನುಮದ್ ಧ್ಯಾನ ಶ್ಲೋಕ. ಕೆಲವು ಖಿಲವಾಯುಸ್ತುತಿ ಪಾಠಗಳಲ್ಲಿ (ಈ ಶ್ಲೋಕವೂ ಮುಂದಿನ ೨೪ನೇ) ಶ್ಲೋಕವೂ ಸೇರಿಲ್ಲ. ಈ ಶ್ಲೋಕದ ಪೂರ್ವಾರ್ಧದ ಎರಡು ಚರಣಗಳೂ ಉಪೇಂದ್ರವಜ್ರಾ ವೃತ್ತದಲ್ಲೂ, ಉತ್ತರಾರ್ಧದ ಎರಡು ಚರಣಗಳು ಇಂದ್ರವಜ್ರಾ ವೃತ್ತದಲ್ಲೂ ಇವೆ, ಆದ್ದರಿಂದ ಒಟ್ಟಿನಲ್ಲಿ ಇದು ಉಪಜಾತಿ ವೃತ್ತ.

**ಮನೋಜವಂ ಮಾರುತತುಲ್ಯವೇಗಂ, ಜಿತೇಂದ್ರಿಯಂ**
**ಬುದ್ಧಿಮತಾಂ ವರಿಷ್ಠಮ್ ।**
**ವಾತಾತ್ಮಜಂ ವಾನರಯೂಥ ಮುಖ್ಯಂ ಶ್ರೀರಾಮದೂತಂ**
**ಶಿರಸಾ ನಮಾಮಿ ॥ ೨೩ ॥**

**ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।**
**ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್ ಸ್ಮರಣಾದ್ಭವೇತ್ ॥ ೨೪ ॥**

---

**ಅನ್ವಯಾರ್ಥ**—**ಮನೋಜವಂ**-**ಮನಃ**-ಮನಸ್ಸಿನಂತೆ, **ಜವಂ**-ವೇಗವುಳ್ಳ, ಮಾರುತ....ವೇಗಂ—**ಮಾರುತ**-ಗಾಳಿಗೆ, **ತುಲ್ಯ**-ಸಮಾನವಾದ, **ವೇಗಂ**-ವೇಗವುಳ್ಳ, ಜಿತೇಂದ್ರಿಯಂ—**ಜಿತ**-ಗೆಲ್ಲಲ್ಪಟ್ಟ, **ಇಂದ್ರಿಯಂ**-ಇಂದ್ರಿಯಗಳುಳ್ಳ, **ಬುದ್ಧಿಮತಾಂ**-ಜ್ಞಾನಿಗಳಲ್ಲಿ, **ವರಿಷ್ಠಂ**-ಸರ್ವೋತ್ತಮರಾದ, ವಾ ತಾ ತ್ಮ ಜ ಂ—**ವಾತ**-ವಾಯುದೇವರ, **ಆತ್ಮಜಂ** ಮಗನಾದ, ವಾನರ....ಮುಖ್ಯಂ—**ವಾನರ**-ಕಪಿಗಳ, **ಯೂಥ**-ಗುಂಪಿಗೆ, **ಮುಖ್ಯಂ**-ಮುಖ್ಯನಾದ, **ಶ್ರೀರಾಮದೂತಂ**-ಶ್ರೀರಾಮದೇವರ ದೂತನಾದ ಹನುಮಂತನನ್ನು, **ಶಿರಸಾ**-ತಲೆ ಬಗ್ಗಿಸಿ, **ನಮಾಮಿ**-ವಂದಿಸುತ್ತೇನೆ.

**ತಾತ್ಪರ್ಯ**—ಹನುಮಂತದೇವರು ಮನೋವೇಗವುಳ್ಳವರು, ಸಮುದ್ರವನ್ನು ವಾಯುವೇಗದಿಂದ ದಾಟಿದರು, ಸಕಲೇಂದ್ರಿಯಗಳನ್ನೂ ನಿಗ್ರಹಿಸಿದವರು, ಜ್ಞಾನಿಶ್ರೇಷ್ಠರಲ್ಲಿ ಸರ್ವಶ್ರೇಷ್ಠರು, ವಾಯುಕುಮಾರರು, ಕಪಿಗಳ ಗುಂಪಿನಲ್ಲೆಲ್ಲಾ ಮುಖ್ಯಸ್ಥರು, ಶ್ರೀರಾಮಸೇವಾಧುರಂಧರರು. ಇಂಥಾ ಆಂಜನೇಯನನ್ನು ಶಿರಸಾ ವಂದಿಸುತ್ತೇನೆ.

**ಶ್ಲೋಕ ೨೪**—(ಬುದ್ಧಿರ್ಬಲಂ) ಈ ಶ್ಲೋಕದಲ್ಲಿ ಹನುಮಂತದೇವರ ಸ್ಮರಣೆ ಮಾಡಿದರೇ ಸಾಕು, ಸಕಲೇಷ್ಟಾರ್ಥಗಳೂ ಸಿದ್ಧಿಸುತ್ತವೆ ಎಂದು ಹನುಮತ್ ಸ್ಮರಣೆಯ ಫಲವನ್ನು ನಿರೂಪಣೆ ಮಾಡಿದೆ.

**ಅನ್ವಯಾರ್ಥ**—೧. **ಬುದ್ಧಿಃ**-(ನಿಶ್ಚಯಾತ್ಮಕ-ಅಂತಃಕರಣ ವೃತ್ತಿಃ) ಪ್ರತಿಯೊಂದು ವಿಚಾರವನ್ನೂ ಇದು ಹೀಗೆಯೇ ಎಂದು ಸರಿಯಾಗಿ ಅರಿತು

**ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।**
**ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥ ೨೫ ॥**

---

ಕೊಳ್ಳುವ ವಿವೇಚನಾಶಕ್ತಿಯೂ, ೨. **ಬಲಂ**–ಶಾರೀರಿಕ ಶಕ್ತಿಯೂ, ೩. **ಯಶಃ**–ಕೀರ್ತಿಯೂ, ೪. **ಧೈರ್ಯಂ**–ಯಾವುದಕ್ಕೂ ಹೆದರದೆ ಮುನ್ನುಗ್ಗಿ ಹೋಗುವ ಸಾಹಸವೂ, ೫. **ನಿರ್ಭಯತ್ವಂ**–ಯಾವುದಕ್ಕೂ ಅಂಜದಿರುವಿಕೆ, ೬. **ಅರೋಗತಾ**–ಯಾವ ರೋಗವೂ ಬರದೇ ಇರುವ ಆರೋಗ್ಯಭಾಗ್ಯವೂ, ೭. **ಅಜಾಡ್ಯಂ**–ಚಟುವಟಿಕೆಯೂ (ಚುರುಕುತನವೂ), ೮. **ವಾಕ್ಪಟುತ್ವಂ**–ವಾಚಾಳಿತನ ಅಥವಾ ಅಸ್ಖಲಿತವಾಗಿ ಭಾಷಣಮಾಡುವ ಶಕ್ತಿ, **ಚ**–ಇವೇ ಮೊದಲಾದ ಸಕಲ ಸಿದ್ಧಿಗಳೂ, **ಹನುಮತ್-ಸ್ಮರಣಾತ್**–ಹನುಮಂತದೇವರ ಸತತ (ಅವಾಚ್ಛಿನ್ನ) ಸ್ಮರಣೆಯಿಂದ, **ಭವೇತ್**–ಆಗುತ್ತವೆ.

**ತಾತ್ಪರ್ಯ**—ಹನುಮಂತನ ಸ್ಮರಣೆಯನ್ನು ಹಗಲೂ ರಾತ್ರಿಯೂ ಮಾಡುತ್ತಿದ್ದರೇ ಸಾಕು, ಅವನಿಗೆ ಸಕಲ ಸಿದ್ಧಿಗಳೂ ಪ್ರಯತ್ನವಿಲ್ಲದೆಯೇ ಲಭಿಸುವುವು. ಬುದ್ಧಿಶಕ್ತಿ, ಶಾರೀರಿಕ ಬಲ, ಧೈರ್ಯ-ಸಾಹಸ, ಯಾವುದಕ್ಕೂ ಹೆದರದ ಕೆಚ್ಚೆದೆ, ಆರೋಗ್ಯಭಾಗ್ಯ, ಮೇಧಾಶಕ್ತಿ, ವಾಕ್ಪಟುತ್ವ ಮೊದಲಾದ ಸಕಲ ಸದ್ಗುಣಗಳೂ ತಮಗೆ ತಾವೇ ಸಿದ್ಧಿಸುವುವು.

**ಶ್ಲೋಕ ೨೫**—(ನ ಮಾಧವ) ಸಕಲ ಸದ್ವೈಷ್ಣವರೂ ಸದಾ ಧ್ಯಾನಿಸುತ್ತಿರಬೇಕಾದ ಎರಡು ಮುಖ್ಯ ವಿಚಾರಗಳನ್ನು ಈ ಶ್ಲೋಕ ತಿಳಿಸುತ್ತದೆ. ಹರಿ ಸರ್ವೋತ್ತಮ, ವಾಯು ಜೀವೋತ್ತಮ, ಈ ವಿಚಾರ ಮನಸ್ಸಿನಲ್ಲಿ ಬೇರೂರಿ ನಿಲ್ಲಬೇಕು.

**ಅನ್ವಯಾರ್ಥ**—**ಮಾಧವಸಮಃ**=**ಮಾ**-ಲಕ್ಷ್ಮೀದೇವಿಗೆ, **ಧವಃ**-ಪತಿಯಾದ ಶ್ರೀವಿಷ್ಣುವಿಗೆ, **ಸಮಃ**–ಸಮಾನವಾದ, **ದೇವಃ**–ದೇವರು (ದೇವತೆಯೂ), **ನ**–ಬೇರೆ ಯಾರೂ ಇಲ್ಲ. **ಮಧ್ವಸಮಃ**–ಮಧ್ವಾಚಾರ್ಯರಿಗೆ ಸಮಾನವಾದ, **ಗುರುಃ**–ಗುರುವೂ, **ನ ಚ**-ಇಲ್ಲವೇ ಇಲ್ಲ. **ತದ್ವಾಕ್ಯಸಮಂ**—**ತತ್**–ಅವರ (ಮಧ್ವಾಚಾರ್ಯರ), **ವಾಕ್ಯ**–ಮಾತಿಗೆ, **ಸಮಂ**–ಸಮಾನವಾದ,

**ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ ।**
**ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇ ಚ ಬಲೇಽಪಿ ಚ ॥ ೨೬ ॥**

---

ಶಾಸ್ತ್ರಂ–ಶಾಸ್ತ್ರವೂ, ನ–ಇಲ್ಲ. ತಸ್ಯ–ಅವರಿಗೆ (ಮಧ್ವಾಚಾರ್ಯರಿಗೆ) ಸಮಃ–ಸಮಾನರಾದ , ಪುಮಾನ್–ಪುರುಷನೂ, ನ ಚ–ಇಲ್ಲವೇ ಇಲ್ಲ.

**ತಾತ್ಪರ್ಯ**—ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನಿಗೆ ಸಮಾನನಾದ ದೇವರು ಭೂತಭವಿಷ್ಯದ್ವರ್ತಮಾನಕಾಲಗಳಲ್ಲೂ ಬೇರೆ ಯಾರೂ ಇಲ್ಲ. ಸಮಾನನಾದವನೇ ಇಲ್ಲದಿರುವಾಗ ಅವನಿಗಿಂತ ಉತ್ತಮನಾದವನಂತೂ ಇರಲು ಸುತರಾಂ ಸಾಧ್ಯವೇ ಇಲ್ಲ. ಹೀಗೆಯೇ ಮಧ್ವಾಚಾರ್ಯರಂತಹ ಗುರುಗಳೂ ಬೇರೆ ಯಾರೂ ಇಲ್ಲ. (ಅವರು ದ್ವಾತ್ರಿಂಶಲ್ಲಕ್ಷಣೋಪೇತರೂ, ಅಜ್ಞಾನಾದಿ ದೋಷದೂರರೂ, ದೈತ್ಯರ ಬಾಧೆಯಿಲ್ಲದವರೂ ಆಗಿದ್ದಾರೆ. ಮಿಕ್ಕ ಯಾರಿಗೂ ಈ ವೈಶಿಷ್ಟ್ಯವಿಲ್ಲ.) ಅದೇ ರೀತಿ ಮಧ್ವಶಾಸ್ತ್ರಕ್ಕೆ ಸಮವಾದ ಶಾಸ್ತ್ರವೂ ಬೇರೆ ಯಾವುದೂ ಇಲ್ಲ. ಮಧ್ವಾಚಾರ್ಯರಂತಹ ಬೇರೆ (ಅಜ್ಞಾನಾದಿ ದೋಷ ದೂರರೂ ಸರ್ವಜ್ಞರೂ ಆದ) ಮನುಷ್ಯನೂ ಇಲ್ಲ.

**ಶ್ಲೋಕ ೨೬**—(ಭೀಮಸೇನ) ಭೀಮಸೇನನ ಸ್ಮರಣೆಯೇ ಜಯಪ್ರದ ಮತ್ತು ಸಿದ್ಧಿಕರ. ಆದ್ದರಿಂದ ಭೀಮನ ಸ್ಮರಣೆಯಿಂದಲೇ ಖಿಲವಾಯುಸ್ತುತಿಯನ್ನು ಉಪಸಂಹಾರ ಮಾಡಿದೆ. ಈ ಶ್ಲೋಕ ಮಹಾಭಾರತದಲ್ಲಿದೆ. ಇದನ್ನು ಶ್ರೀಮದಾಚಾರ್ಯರೇ ತಾತ್ಪರ್ಯನಿರ್ಣಯದಲ್ಲಿ (೨ ಅಧ್ಯಾ. ೧೬೫ ಶ್ಲೋ.) ಉದಹರಿಸಿದ್ದಾರೆ.

**ಅನ್ವಯಾರ್ಥ**—ಪಾಂಡಿತ್ಯೇ ಚ–ಪಾಂಡಿತ್ಯದಲ್ಲೂ, ಪಟುತ್ವೇ ಚ–ದಕ್ಷತೆಯಲ್ಲೂ, ಶೂರತ್ವೇ ಚ–ಪರಾಕ್ರಮದಲ್ಲೂ, ಬಲೇ ಅಪಿ ಚ–ಬಲದಲ್ಲೂ ಸಹ, ಭೀಮಸೇನ ಸಮಃ–ಭೀಮಸೇನನಿಗೆ ಸರಿಸಮಾನನಾದವನು, ಉಭಯೋಃ ಸೇನಯೋಃ ಅಪಿ–ಕೌರವ ಪಾಂಡವ ಎರಡು ಸೈನ್ಯಗಳಲ್ಲೂ, ನಾಸ್ತಿ–ಇಲ್ಲ.

ತಾತ್ಪರ್ಯ—ಪಾಂಡವರ ಸೈನ್ಯದಲ್ಲಾಗಲಿ ಕೌರವರ ಸೈನ್ಯದಲ್ಲಾಗಲಿ ಪಾಂಡಿತ್ಯ, ದಕ್ಷತೆ, ಶೌರ್ಯ, ಬಲ ಮೊದಲಾದ ಯಾವ ಗುಣದಲ್ಲೂ ಭೀಮಸೇನನಿಗೆ ಸಮಾನನಾದ ವೀರನು ಬೇರೆ ಯಾರೂ ಇಲ್ಲ. ಇಲ್ಲಿಗೆ ಖಿಲವಾಯುಸ್ತುತಿಯ ಅರ್ಥ-ತಾತ್ಪರ್ಯಗಳು ಮುಗಿದುವು.

॥ ಶ್ರೀಕೃಷ್ಣಾರ್ಪಣಮಸ್ತು ॥

## ಸಮರ್ಪಣೆ

ಖಿಲವಾಯುಸ್ತುತಿ ಶ್ಲೋಕ-ಸರಲಾರ್ಥೋ ಯಥಾಮತಿ ।
ಕಥಿತೋ ವಿಷ್ಣುತೀರ್ಥೇನ ಹರಿಪ್ರೀತ್ಯರ್ಥಮಾದರಾತ್ ॥

ಅರ್ಥ :— ಖಿಲವಾಯುಸ್ತುತಿಯ ಶ್ಲೋಕಗಳ ಸರಲಾರ್ಥವನ್ನು ಸುಲಭವಾಗಿ ತಿಳಿಯುವಂತೆ ಶ್ರೀಹರಿವಾಯುಗಳ ಪ್ರೀತ್ಯರ್ಥವಾಗಿ ಆದರಪೂರ್ವಕ ವಿಷ್ಣುತೀರ್ಥ ಎಂಬಾತ ಹೇಳಿದ್ದಾನೆ.



## ಶ್ರೀ ವಿಷ್ಣುತೀರ್ಥರ ಇತರ ಪ್ರಕಟಣೆಗಳು :

1. ನಖಸ್ತುತಿ (ಶ್ರೀ ಹರಿವಾಯುಸ್ತುತಿಯ ಮೊದಲನೇ ಭಾಗ)
(ಎರಡನೇ ಮುದ್ರಣ ಅಚ್ಚಾಗುವುದು)

2. ಶ್ರೀ ಹರಿವಾಯುಸ್ತುತಿ–2ನೇ ಭಾಗ (೧ ರಿಂದ ೨೧ ಶ್ಲೋಕಗಳು)
410 ಪುಟಗಳು ರೂ. 60

3. ಶ್ರೀ ಹರಿವಾಯುಸ್ತುತಿ–3ನೇ ಭಾಗ (ಕಡೆಯ 20 ಶ್ಲೋಕಗಳು)
442 ಪುಟಗಳು ರೂ. 60

4. ಖಿಲವಾಯುಸ್ತುತಿ (ಶ್ರೀ ಹರಿವಾಯುಸ್ತುತಿಯ 4ನೇ ಭಾಗ)
ಬಳಿತ್ಥಾಸೂಕ್ತದ ಅರ್ಥಸಹಿತ, ಪುಟ 200 ರೂ. 25

5. ಶ್ರೀ ರಾಘವೇಂದ್ರಸ್ವಾಮಿಗಳ ಸರ್ವಸಮರ್ಪಣಗದ್ಯ
(ವಿವರಣೆ ಸಹಿತ) 52 ಪುಟ ರೂ. 8

6. ಯಂತ್ರೋದ್ಧಾರಕರು ಮತ್ತು ನವವೃಂದಾವನ
32 ಪುಟಗಳು ರೂ. 5

7. ಗುರುಮಂತ್ರ ರೂ. 1

8. ನರಸಿಂಹ ಸುಳಾದಿ, ದುರ್ಗಾಸುಳಾದಿ, ಧನ್ವಂತರಿ ಸುಳಾದಿ
(ಕನ್ನಡಲಿಪಿ 2ರೂ. ದೇವನಾಗರೀಲಿಪಿ 3 ರೂ.)

9. ಮುನಿತ್ರಯ ಸುಳಾದಿ (ಶ್ರೀ ಪಾದರಾಯರ, ವ್ಯಾಸರಾಯರ,
ರಾಘವೇಂದ್ರ ಸ್ವಾಮಿಗಳ ಸುಳಾದಿಗಳು)
(ಕನ್ನಡ ಲಿಪಿ 2 ರೂ. ದೇವನಾಗರಿಲಿಪಿ 2 ರೂ.)

10. ಪುರುಷ ಸೂಕ್ತ ವ್ಯಾಖ್ಯಾನ (ಏಳು ಸಂಸ್ಕೃತ ವ್ಯಾಖ್ಯಾನಗಳು
ಮತ್ತು ಕನ್ನಡ ವಿವರಣೆ) ಅಚ್ಚಾಗುತ್ತಿದೆ; ಸುಮಾರು 600 ಪುಟ